1790

# ಸತ್ಯೋದಯ





ಲೇಖಕರು :

ಶ್ರೀ ರಾಮಚಂದ್ರ

ಅಧ್ಯಕ್ಷರು, ಶ್ರೀರಾಮಚಂದ್ರಮಿಷನ್

ಷಾಹಜಹಾನ್‌ಪೂರ್ ( ಉ. ಪ್ರ. )



19-12-1962



ಇಂಗ್ಲಿಷ್ ಮೂಲ: ಶ್ರೀ ರಾಮಚಂದ್ರ

ಅನುವಾದ: ಶ್ರೀ. ಆ. ಸನ್ನಾಡ, ಎಂ. ಎ., ಬಿ. ಎಡ್.



ಬೆಲೆ: ೧·೫೦

# ಪ್ರಸ್ತಾವನೆ

ಈ ಕಿರು ಹೊತ್ತಗೆಯಲ್ಲಿ ವಿವೇಚಿಸಲಾದ ವಿಷಯವನ್ನು ಕುರಿತು ನನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುವ ಮೊದಲು ಲೇಖಕರ ಬಗ್ಗೆ ಹಲವು ಮಾತುಗಳನ್ನು ಬರೆಯಲು ನನಗೆ ತುಂಬ ಸಂತೋಷವಾಗುತ್ತಿದೆ. ಲೇಖಕರಾದ ಮಹಾತ್ಮಾ ರಾಮಚಂದ್ರಜಿಯವರು ಶ್ರೀರಾಮಚಂದ್ರ ಮಿಷನ್ನಿನ ಅಧ್ಯಕ್ಷರಾಗಿದ್ದಾರೆ. ಅವರು ಎಲ್ಲ ಬಗೆಯ ಪ್ರಾಪಂಚಿಕ ಚಿಂತೆ-ಹೊಣೆಗಳಿಂದೊಡಗೂಡಿದ ಸಾಧಾರಣವಾದ ಗೃಹಸ್ಥಜೀವನವನ್ನು ಸಾಗಿಸುತ್ತಿರುವರು. ಅವರ ದೇಹವು ನಾಜೂಕಾಗಿದ್ದು ತೀರ ನಿರಾಡಂಬರ ಜೀವಿಗಳಾಗಿರುವರು. ಯಾವುದಾದರೊಂದು ನಿರ್ಣಯಕ್ಕೆ ಬರುವ ಮುನ್ನ ವಿಷಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸುವುದು ನನ್ನ ರೂಢಿಯಾಗಿರುವುದರಿಂದ ನಾನು ಅವರನ್ನು ಐದು ವರುಷಗಳ ವರೆಗೆ ಅತ್ಯಂತ ಸೂಕ್ಷ್ಮವಾಗಿ ಪರೀಕ್ಷಿಸಿದ ಮೇಲೆ, ಪೂರ್ಣ ವಿಕಾಸಹೊಂದಿದ ಜೀವಿಯಲ್ಲಿರಬೇಕಾದ ಎಲ್ಲ ಗುಣಗಳೂ ಅವರಲ್ಲಿವೆಯೆಂಬುದನ್ನು ಮನಗಂಡಿದ್ದೇನೆ. ತೀರ ವಿರಳವೆಂದು ಹೇಳಬಹುದಾದ ಆಧ್ಯಾತ್ಮಿಕ ಸಿದ್ಧಿಗಳು ಅವರಲ್ಲಿವೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ನನ್ನ ಅಭಿಪ್ರಾಯ. ಅವರು ರಾಜಯೋಗದ ಪದ್ಧತಿಯನ್ನು ಹೊಸದಾಗಿ ರೂಪಿಸಿ ಜನಸಾಮಾನ್ಯರೆಲ್ಲರಿಗೂ ಸುಲಭವಾದ ಸಹಜಮಾರ್ಗವೆಂಬ ಹೆಸರಿನಿಂದ ಪ್ರಚುರಪಡಿಸಿದ್ದಾರೆ. ಇದಕ್ಕೂ ಮುಂಚೆ ಪ್ರಕಟವಾದ ಅವರ 'Efficacy of Rajayoga in the Light of Sahaj Marga' ಎಂಬ ಗ್ರಂಥವು ಈ ಪದ್ಧತಿಯನ್ನು ಕುರಿತು ವಿಸ್ತಾರವಾಗಿ ವಿವೇಚಿಸುತ್ತದೆ. ಈ ಪದ್ಧತಿಯ ವೈಶಿಷ್ಟ್ಯವೆಂದರೆ ಅಭ್ಯಾಸಿಯಲ್ಲಿ ಯೌಗಿಕಶಕ್ತಿಯ ಪ್ರಾಣಾಹುತಿಯೆಂದು ಹೇಳಲಾಗುತ್ತದೆ. ಆದರಿಂದ ಅಭ್ಯಾಸಿಯ ಎಲ್ಲ ಆಂತರಿಕ ತೊಡಕುಗಳೂ ದೂರವಾಗಿ ಚಕ್ರಗಳ ಶುದ್ಧಿಯಾಗಿ ದಾರಿಯು ಸುಗಮವಾಗುವುದು. ನಾನು ಇದನ್ನು ಬರೆದುದರ ಉದ್ದೇಶವೆಂದರೆ, ಯಾವಾಗಲೂ ಸಾಧನದ ಸತ್ಪರಿಣಾಮ ಹಾಗು ಗುರುವಿನ ಸಾಮರ್ಥ್ಯ— ಇವು ಬಹಳ ಮುಖ್ಯ; ಮತ್ತು ನಾವು ಇವುಗಳನ್ನಾರಿಸಿ-

ಕೊಳ್ಳುವಾಗ ತಪ್ಪು ಮಾಡಿದುದಾದರೆ ನಮ್ಮ ಎಲ್ಲ ಪ್ರಯತ್ನಗಳೂ ವಿಫಲವಾಗಬಹುದು.

ಈ ಪುಸ್ತಕವು ರಾಜಯೋಗದ ಮೇಲೆ ಸಂಕ್ಷೇಪ ಕೃತಿಯಾಗಿದ್ದು ಆಧ್ಯಾತ್ಮದಲ್ಲಿ ಅಭಿರುಚಿಯುಳ್ಳವರ ಸೂಕ್ಷ್ಮ ಅಧ್ಯಯನಕ್ಕೆ ತಕ್ಕುದಾಗಿದೆ. ಪ್ರಾಚೀನ ಮಹರ್ಷಿಗಳ ಉಪದೇಶಗಳಲ್ಲಿ ನಿರೂಪಿತವಾದ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ರಾಜಯೋಗದ ಮುಖ್ಯ ಉದ್ದೇಶವಾಗಿರುವುದು. ಆ ಉಪದೇಶಗಳ ಬಗ್ಗೆ ಕೇವಲ ಸ್ತೋತ್ರಮಾಡುವುದರಿಂದಾಗಲಿ ಅವು ನೀತಿಯ ಅತ್ಯುತ್ತಮ ನಿಯಮಗಳೆಂದು ನಂಬುವುದರಿಂದಾಗಲಿ ನಾವು ಬಹುದೂರ ಹೋಗಲಾರೆವು. ಆದರೆ ಅವೇ ಉಪದೇಶಗಳನ್ನೇ, ಸತ್ಯವೆಂದು ಸ್ವತಃ ಮನಗಂಡು ತನ್ನ ಜೀವನದ ನಿಯಮಗಳನ್ನಾಗಿರಿಸಿಕೊಳ್ಳುವುದರಲ್ಲಿ ಯಶಸ್ವಿಯಾದರೆ ಆದೆಷ್ಟೋ ವ್ಯತ್ಯಾಸವಾಗುವುದು. ಇದು ಅತ್ಯುಚ್ಚ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸುವುದರಲ್ಲಿ ಆತನಿಗೆ ಸಹಾಯಕವಾಗುವುದು. ಇಂಥ ವ್ಯಕ್ತಿಯು ಹೊಂದುವ ಶಕ್ತಿಗಳು ಅಪರಿಮಿತವಾಗಿದ್ದರೂ ಸ್ವತಃ ತನಗೇ ಅವುಗಳ ಅರಿವಿರುವುದಿಲ್ಲ. ಆತನ ಎಲ್ಲ ಕಾರ್ಯಗಳೂ ದೈವೀ ನಿರ್ದೇಶಗಳಿಗನುಸಾರವಾಗಿ ನಡೆಯುವುವು. ಇಂಥವನು ಸಂಪತ್ತಿನ ಕಡೆಗಾಗಲಿ ಅದರಿಂದುಂಟಾಗುವ ಪ್ರಾಪಂಚಿಕ ಸುಖದ ಕಡೆಗಾಗಲಿ ಗಮನವನ್ನೇ ಕೊಡುವುದಿಲ್ಲ. ಕೀರ್ತಿಯನ್ನು ಗಳಿಸಿ ಹೆಸರುವಾಸಿಯಾಗಬೇಕೆಂಬ ಕಲ್ಪನೆಯು ಆತನ ತಲೆಯಲ್ಲಿ ಎಂದಿಗೂ ಸುಳಿಯದು. ಆತನ ಕಾರ್ಯಗಳು ಯಾವುದೇ ಸ್ವಾರ್ಥದಿಂದ ಪ್ರೇರಿತವಾಗಿರುವುದಿಲ್ಲ. ಇವೇ ಹಲವು ಪ್ರಮಾಣಗಳಿಂದ ನಾನು ಲೇಖಕರನ್ನು ಪರೀಕ್ಷಿಸಲು ಯತ್ನಿಸಿರುವೆನು; ಹಾಗು ನನ್ನ ಮಟ್ಟಿಗೆ ಹೇಳುವುದಾದರೆ, ಉಪರ್ಯುಕ್ತ ಗುಣಗಳು ಅವರಲ್ಲಿ ಹೇರಳವಾಗಿ ಕಂಡು ಬರುವುವು.

ಈ ಪುಸ್ತಕದಲ್ಲಿ ನಿರೂಪಿಸಲಾದ ವಿಷಯಗಳು ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವವನಿಗೆ ಅತ್ಯಂತ ಮುಖ್ಯವಾಗಿವೆ. ನಾವು ಕೊನೆಯವರೆಗೂ ಗೃಹಸ್ಥಜೀವನದಲ್ಲಿದ್ದುಕೊಂಡೇ ಅತ್ಯುಚ್ಚ ಸಿದ್ಧಿಗಳನ್ನು ಪಡೆಯಬಲ್ಲೆವೆಂಬುದು ಇವರಲ್ಲಿಯ ಸಂತೋಷಜನಕ ಹಾಗು ಉತ್ತೇಜನಕಾರಕ ಲಕ್ಷಣವಾಗಿದೆ.

ಸಂನ್ಯಾಸವನ್ನು ತೆಗೆದುಕೊಳ್ಳದೆ ಉನ್ನತ ಯೌಗಿಕ ಸಿದ್ಧಿಗಳು ಶಕ್ಯವಾಗುವು-ದಿಲ್ಲವೆಂದು ಸಾವಿರಾರು ವರ್ಷಗಳಿಂದ ನಮಗೆ ಎಡೆಬಿಡದೆ ಹೇಳುತ್ತ ಬಂದಿ-ರುವರಾದುದರಿಂದ ನಾವು ತುಂಬ ಆಧೈರ್ಯಪಟ್ಟುಕೊಂಡಿದ್ದೇವೆ. ಆಧ್ಯಾ-ತ್ಮಿಕ ಜೀವನದ ಆವಶ್ಯಕ ಲಕ್ಷಣವಾದ ವೈರಾಗ್ಯವು, ಪ್ರಾಪಂಚಿಕ ಜೀವನದ ಸಂಬಂಧವನ್ನು ಕಡಿದುಕೊಂಡು ಪರಿವ್ರಾಜಕವೃತ್ತಿಯನ್ನನುಸರಿಸುವುದರ-ಲ್ಲಿಯೆ ಇರುವುದೆಂದು ಸಾಮಾನ್ಯವಾಗಿ ಎಲ್ಲ ವೇದಿಕೆಗಳ ಮೇಲಿಂದಲೂ ಉಪದೇಶಿಸಲಾಗುತ್ತಿದೆ. ಆದರೆ ವಸ್ತುತಃ ಹೀಗಿರುವುದಿಲ್ಲ. ಜನಕರಾಜನ ಜೀವನವು ಇದಕ್ಕೆ ತಕ್ಕ ಉದಾಹರಣೆಯಾಗಿದೆ. ಎಲ್ಲ ಅವಸ್ಥೆಗಳಲ್ಲಿಯೂ ಪರಿಸ್ಥಿತಿಗಳಲ್ಲಿಯೂ ವೈರಾಗ್ಯದ ಸ್ಥಿತಿಯಿರಲು ಶಕ್ಯವೆಂಬುದನ್ನು ಒಪ್ಪಿ-ಕೊಳ್ಳಬಹುದು.

ದೇವರು ನಿರ್ವಿಶೇಷ ಶೂನ್ಯನೂ ಎಲ್ಲ ಗುಣ-ಶಕ್ತಿ-ಕ್ರಿಯಾರಹಿತನೂ ಆಗಿರುವನೆಂಬ ಲೇಖಕರ ಕಲ್ಪನೆಯು ಸತ್ಯದ ಕಡೆಗಿನ ಸಾಹಸಪೂರ್ಣ ಹೆಜ್ಜೆಯಾಗಿದೆ. ಸತ್ಯವಸ್ತುವು ಶುದ್ಧವೂ ಸರಳವೂ ಆಗಿದ್ದು ಧರ್ಮದ ಕ್ಷೇತ್ರವನ್ನು ಮೀರಿ ನಿಂತಿದೆ. ನಿಜವಾಗಿಯೂ ಈ ಪುಸ್ತಕದಲ್ಲಿ ಹೇಳಿರು-ವಂತೆ, "ಮುಕ್ತಿಮಾರ್ಗದಲ್ಲಿ ಮನುಷ್ಯನನ್ನು ಕೊಂಡೊಯ್ಯಲು ಧರ್ಮವು ಪ್ರಾಥಮಿಕ ಮೆಟ್ಟಲು ಮಾತ್ರ." ಆಧ್ಯಾತ್ಮಿಕ ಮಾರ್ಗವನ್ನನುಸರಿಸಿದಾಗ ಮುಕ್ತಿಯು ಸಾಧ್ಯವಾಗುವುದು. ಆತ್ಮವನ್ನು ಬಂಧನದಲ್ಲಿರಿಸಿದ ಎಲ್ಲ ಆವರಣಗಳನ್ನು ಕಳಚುವುದೇ ಆಧ್ಯಾತ್ಮದ ಸಾರವಾಗಿದೆ. ಸತ್ಯದ ಬಗೆ-ಗಿರುವ ಲೇಖಕರ ದೃಷ್ಟಿಕೋನವನ್ನು ಎರಡನೆಯ ಅಧ್ಯಾಯದಲ್ಲಿ ಬರುವ ರೇಖಾಚಿತ್ರದ ಮೂಲಕ ಸ್ಪಷ್ಟಪಡಿಸಲಾಗಿದೆ. ತೀರ ಹೊರಗಿನ ವೃತ್ತವು ನಮ್ಮ ಇಂದಿನ ಅಸ್ತಿತ್ವದ ಸ್ಥೂಲತಮ ರೂಪವನ್ನು ಸೂಚಿಸಿದರೆ ಕೇಂದ್ರ ಅಥವಾ ಮೂಲ ಆಧಾರವು ಅಂತಿಮ ಗುರಿಯಾಗಿದೆ. ಹೊರಗಿನ ವೃತ್ತ-ದಿಂದ ಕೇಂದ್ರದ ಕಡೆಗಿನ ನಮ್ಮ ಯಾತ್ರೆಯು ಮನುಷ್ಯನು ಮುಟ್ಟಬಹು-ದಾದ ತುತ್ತತುದಿಯ ಬಿಂದುವಿನ ವರೆಗಿನ ಆಧ್ಯಾತ್ಮದ ಎಲ್ಲ ಹಂತಗಳನ್ನೂ ಒಳಗೊಳ್ಳುತ್ತದೆ.

'ಭವಿಷ್ಯವಾಣಿ' ಯೆಂಬ ಕೊನೆಯ ಅಧ್ಯಾಯವು ಭವಿಷ್ಯತ್ಕಾಲದ ಬಗೆಗಿನ ಲೇಖಕರ ವಿಚಾರಗಳನ್ನೊಳಗೊಂಡಿದೆ. ಅದನ್ನು ಕೇವಲ ಜ್ಯೋತಿಷಿ

ಯೊಬ್ಬನ ಭವಿಷ್ಯಕಥನವೆಂದು ಭಾವಿಸಬಾರದು. ಪರಿಪೂರ್ಣತೆಯ ಅತ್ಯು-ನ್ನತ ಮಟ್ಟದಲ್ಲಿ ಯೋಗಿಯು ನಿಸರ್ಗದೊಂದಿಗೆ ನೇರವಾದ ಸಂಪರ್ಕದಲ್ಲಿರು-ತ್ತಾನೆ. ಆದುದರಿಂದ, ವರ್ತಮಾನಕಾಲದಂತೆಯೆ ಭೂತಭವಿಷ್ಯತ್ತುಗಳ ಪ್ರತಿಯೊಂದು ಸಂಗತಿಯೂ ಆತನಿಗೆ ಸ್ಪಷ್ಟವಾಗುವುದು. ನಿಸರ್ಗದಲ್ಲಿಯ ಪ್ರತಿಯೊಂದನ್ನೂ ಆತನು ಅಪರೋಕ್ಷಜ್ಞಾನದಿಂದ ತಿಳಿದುಕೊಳ್ಳುವನು.

ಸಾಕ್ಷಾತ್ಕಾರದಲ್ಲಿ ಆಸಕ್ತಿಯುಳ್ಳವರೆಲ್ಲರಿಗೂ ನನ್ನ ಮತದಂತೆ ಅತ್ಯಂತ ಲಾಭದಾಯಕವಾದ ಕೃತಿಯನ್ನು ಓದುಗರಿಗೆ ಪರಿಚಯಮಾಡಿಕೊಡಲು ಈ ಕೆಲವು ಸಾಲುಗಳನ್ನು ಬರೆದಿದ್ದೇನೆ. ಆದುದರಿಂದ ಅಧ್ಯಾತ್ಮದ ಪ್ರತಿ-ಯೊಬ್ಬ ವಿದ್ಯಾರ್ಥಿಗೂ ಇದನ್ನು ಸೂಕ್ಷ್ಮವಾಗಿ ಅಭ್ಯಸಿಸಲು ನಿಸ್ಸಂಕೋಚ-ವಾಗಿ ಸಲಹೆನೀಡುತ್ತೇನೆ.

ನ್ಯಾಯಾಧೀಶ,
ಹಾಯ್ ಕೋರ್ಟ್,
ಅಲಹಾಬಾದ.

ಎಂ. ಎಲ್. ಚತುರ್ವೇದಿ

# ಅನುವಾದಕನ ಮಾತು

ನನ್ನ ಪೂಜ್ಯ ಗುರುಗಳಾದ ಶ್ರೀ ರಾಮಚಂದ್ರಜಿ ಮಹಾರಾಜರು ತಮ್ಮ 'Reality at Dawn' ಎಂಬ ಇಂಗ್ಲಿಷ್ ಪುಸ್ತಕವನ್ನು ಕನ್ನಡಕ್ಕೆ ಅನುವಾದಮಾಡಲು ನನಗೆ ಅಪ್ಪಣೆಯನ್ನಿತ್ತು ಅನುಗ್ರಹಿಸಿದ್ದಾರೆ. ಅನುವಾದ ಮಾಡುವಾಗ ಮೂಲದಲ್ಲಿಯ ಅಭಿಪ್ರಾಯಕ್ಕೆ ಭಂಗಬಾರದಂತೆ ಸಾಧ್ಯವಾದಷ್ಟೂ ಪ್ರಯತ್ನಿಸಲಾಗಿದೆ. ಇದಕ್ಕೂ ಮೀರಿ ಎಲ್ಲಿಯಾದರೂ ಅಸ್ಪಷ್ಟತೆ, ದೂರಾನ್ವಯ ಮುಂತಾದುವು ಕಂಡುಬಂದಲ್ಲಿ ಓದುಗರು ಇಂಗ್ಲಿಷ್ ಮೂಲವನ್ನೇ ನೋಡಿ ಸಮಾಧಾನಹೊಂದಬೇಕು.

ನನ್ನ ಗುರುಬಂಧುಗಳಾದ ಶ್ರೀ ರಾಘವೇಂದ್ರರಾಯರು ಎಷ್ಟೋ ಉಪಯುಕ್ತ ತಿದ್ದುಪಡಿಗಳನ್ನು ಸೂಚಿಸಿ ಅನುವಾದದ ಸ್ಪಷ್ಟತೆಯನ್ನು ಹೆಚ್ಚಿಸಿದ್ದಕ್ಕಾಗಿ ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ. ಇದು ಪುಸ್ತಕ ರೂಪದಲ್ಲಿ ಹೊರಬರುವ ಮೊದಲು ಶ್ರೀ ವಿನೀತ ರಾಮಚಂದ್ರರಾಯರು ತಮ್ಮ 'ಪ್ರದೀಪ' ದಲ್ಲಿ ಇದನ್ನು ಧಾರಾವಾಹಿಯಾಗಿ ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಅವರಿಗೂ ನನ್ನ ಕೃತಜ್ಞತೆಗಳು.

ಅನುಭಾವ ಮಾರ್ಗದ ಸಂಪದ್ಯುಕ್ತ ಪರಂಪರೆಯನ್ನುಳ್ಳ ಕನ್ನಡ ಜನತೆಯು ಇದರಿಂದ ಲಾಭಪಡೆಯುವುದೆಂದು ಆಶಿಸಲಾಗಿದೆ.

ಧಾರವಾಡ. ಶ್ರೀ. ಅ. ಸರ್ನಾಡ

೨೦-೫-೬೨

# ವಿಷಯಸೂಚಿ


| ಅಧ್ಯಾಯ | | ಪುಟ |
|---|---|---|
| ೧. | ಧರ್ಮ | .... ೧ |
| ೨. | ಜೀವನದ ಗುರಿ | ... ೧೩ |
| ೩. | ಮಾರ್ಗಗಳು ಮತ್ತು ಸಾಧನಗಳು | .... ೨೨ |
| ೪. | ಗುರು | ... ೩೯ |
| ೫. | ಆಧ್ಯಾತ್ಮಿಕ ತರಬೇತಿ | .... ೫೭ |
| ೬. | ಶ್ರದ್ಧೆ | .... ೭೧ |
| ೭. | ನಿರಂತರ ಸ್ಮರಣೆ | .... ೭೭ |
| ೮. | ಆತ್ಮಸಮರ್ಪಣ | .... ೮೪ |
| ೯. | ಸಾಕ್ಷಾತ್ಕಾರ | ... ೮೯ |
| ೧೦. | ಭವಿಷ್ಯವಾಣಿ | .... ೧೦೫ |

# ಅರ್ಪಣ

ನನ್ನ ಗುರುಬಂಧುಗಳಾದ:

ದಿ. ಶ್ರೀ ರಾಮೇಶ್ವರ ಪ್ರಸಾದ ಮಿಶ್ರ, ಇವರಿಗೆ

—ರಾಮಚಂದ್ರ



ಶ್ರೀ ರಾಮಚಂದ್ರಜಿ

ಅಧ್ಯಕ್ಷರು, ಶ್ರೀರಾಮಚಂದ್ರ ಮಿಷನ್

ಶಾಹಜಹಾನ್ ಪೂರ್ (ಉ. ಪ್ರ.)

# ಅಧ್ಯಾಯ: ೧

# ಧರ್ಮ

ಮಾನವಜನಾಂಗದ ಉದಯವಾದಂದಿನಿಂದ, ದೇವರನ್ನು ಪೂಜಿಸುವುದು, ಬಾಹ್ಯದೃಶ್ಯಗಳ ಹಿಂದಿರುವ ರಹಸ್ಯಗಳನ್ನು ಕಂಡುಹಿಡಿಯುವುದು, ಹಾಗು ಮೂಲಸತ್ಯವನ್ನು ಅರಿತುಕೊಳ್ಳುವುದು ಅದರ ಅನ್ವೇಷಣೆಯಾಗಿದೆ. ಇಂತಿದು ಧರ್ಮದ ಜನನ. ಪೂಜಕನು ಸ್ವರ್ಗದ ಶಾಶ್ವತಾನಂದವನ್ನಾಗಲಿ ಇಂತಹ ಯಾವುದಾದರೊಂದು ದೃಷ್ಟಿಕೋನವನ್ನಾಗಲಿ ತನ್ನ ಅಂತಿಮ ಧ್ಯೇಯವನ್ನಾಗಿ ಇಟ್ಟುಕೊಳ್ಳುವನು. ಈ ಪ್ರಕಾರವಾಗಿ ಆಯಾ ಹಿರಿಯ ಧರ್ಮಸಂಸ್ಥಾಪಕರ ವೈಯಕ್ತಿಕ ಅನುಭವಗಳ ಆಧಾರದ ಮೇಲೆ ನಿರ್ದಿಷ್ಟ ಪೂಜೆಪುರಸ್ಕಾರಗಳನ್ನೊಳಗೊಂಡ ಧರ್ಮಗಳು ಜಗತ್ತಿನಲ್ಲಿ ಜನ್ಮ ತಾಳಿವೆ. ಆದರೆ ಸಾವಿರಾರು ವರುಷಗಳು ಕಳೆದು ಪರಿಸರಗಳೆಲ್ಲವೂ ಪರಿವರ್ತನೆ ಹೊಂದಿ ಜೀವನವೇ ಮೂಲತಃ ಮಾರ್ಪಟ್ಟ ಅನಂತರವೂ ಅವೇ ಹಳೆಯ ಸ್ವರೂಪಗಳಿಗೂ ತತ್ತ್ವಗಳಿಗೂ ಅಂಟಿಕೊಳ್ಳಲಾಗುತ್ತಿದೆ. ಈಗ ಕೇವಲ ಬಾಹ್ಯಸ್ವರೂಪವಷ್ಟೇ ಉಳಿದಿದ್ದು ಅಂತಃಸತ್ತ್ವ ನಷ್ಟವಾಗಿದೆ. ಅದರ ಪರಿಣಾಮವಾಗಿ ಧರ್ಮದ ಸಾಧನವು ಜರಠವಾಗಿದ್ದು ಇಂದಿನ ಧರ್ಮವೆಂದರೆ ಕೇವಲ ಒಂದು ಗತಕಾಲದ ಅವಶೇಷವಾಗಿ ಇಲ್ಲವೆ ಮೃತರ ಅಸ್ಥಿಗಳಾಗಿ ಉಳಿದುಕೊಂಡಿದೆಯೆಂದು ಹೇಳಿದರೆ ತಪ್ಪಾಗದು. ನಾವು ನಿಜವಾದ ಧರ್ಮವನ್ನು ಗೋರಿಯಲ್ಲಿ ಹುಗಿದು ಬಿಟ್ಟಿದ್ದೇವೆ. ಧರ್ಮದ ಹೆಸರಿನಿಂದ ಚಪ್ಪಾಳೆ ತಟ್ಟುವುದನ್ನುಳಿದು ನಾವು ಮತ್ತೇನನ್ನೂ ಮಾಡುವುದಿಲ್ಲ. ನಿಜವಾದ ಸತ್ತ್ವವು ಅಳಿದು ಹೋಗಿ ಅದರ ಸ್ಥಾನದಲ್ಲಿ ಬಾಹ್ಯಾಚಾರಗಳು ಮಾತ್ರ ಉಳಿದಿವೆ. ಬಾಹ್ಯರೂಪಗಳು ಮತ್ತು ಸಂಪ್ರದಾಯಗಳು ಇವಿಷ್ಟೇ ಗೋಚರವಾಗುತ್ತಿದ್ದು, ಅವುಗಳನ್ನೇ ಸತ್ಯತೆಯ ಸೋಂಕು ಸಹ ಇಲ್ಲದ ಧಾರ್ಮಿಕತೆಯಿಂದಲೂ ನಿಷ್ಠೆಯಿಂದಲೂ ಅನುಸರಿಸಲಾಗುತ್ತಿದೆ. ಸತ್ಯತೆಯಲ್ಲಿಯ ನಮ್ಮ ಶ್ರದ್ಧೆಯು ಇಲ್ಲವೆಂಬಷ್ಟು ಮಟ್ಟಿಗೆ ಕಡಮೆಯಾಗಿದೆ. ಅದು ಕೇವಲ

ಬಾಹ್ಯರೂಪಗಳಲ್ಲಿಯೂ ಪೂಜೆ-ಪುರಸ್ಕಾರಗಳಲ್ಲಿಯೂ ವಿರೂಪಗೊಂಡಿದೆ ಯೆಂದು ಹೇಳಬಹುದು. ಕ್ರಮೇಣ ಅದು ಮತಾಂಧತೆ ಮತ್ತು ದುರಾಗ್ರಹ ಗಳಲ್ಲಿ ಪರ್ಯವಸಿತವಾಗಿದ್ದು ದುರ್ದೈವದಿಂದ ಇದೇ ಇಂದಿನ ಧರ್ಮದ ಸ್ಥಾಯಿಸ್ವರೂಪವಾಗಿಬಿಟ್ಟಿದೆ. ಬಾಹ್ಯಾಚಾರಗಳಲ್ಲಿಯ ನಮ್ಮ ಕುರುಡು ನಂಬುಗೆಯು ಸತ್ಯದ ಬಗೆಗೆ ನಮ್ಮನ್ನು ಅಜ್ಞಾನದಲ್ಲಿಡುವುದಲ್ಲದೆ, ನಮಗೆ ಅರಿವಾಗದಂತೆ, ಬೇರೆ ರೀತಿಯ ಪೂಜೆಪುರಸ್ಕಾರಗಳಲ್ಲಿ ನಂಬುಗೆಯನ್ನಿಡುವ ಜನರ ಬಗ್ಗೆ ನಮ್ಮಲ್ಲಿ ತಿರಸ್ಕಾರದ ಭಾವನೆಯನ್ನು ಬಲಿಸುತ್ತದೆ. ತತ್ಪರಿಣಾಮವಾಗಿ ಬೇರೆ ಬೇರೆ ಧರ್ಮಗಳ ಅನುಯಾಯಿಗಳಲ್ಲಿ ಮಾತ್ಸರ್ಯ-ಕಲಹಗಳುಂಟಾಗಿವೆ.

ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿದ್ದರೂ ಸ್ವ-ರಾಜ್ಯ ಅಥವಾ ಆತ್ಮಸ್ವಾತಂತ್ರ್ಯವು ಇನ್ನೂ ಬರಬೇಕಾಗಿದೆ. ವಿಶಾಲದೃಷ್ಟಿ ಹಾಗು ಸ್ವತಂತ್ರವಾಗಿ ವಿಚಾರಮಾಡುವ ಸಾಮರ್ಥ್ಯದ ಅಭಾವವೇ ಮುಖ್ಯ ಪ್ರತಿಬಂಧವಾಗಿದೆ. ವಾತಾವರಣವೆಲ್ಲ ದ್ವೇಷಾಸೂಯೆಗಳಿಂದ ತುಂಬಿಹೋಗಿದೆ. ಸಮಾಜ, ಸಂಸ್ಕೃತಿಗಳ ಕಟ್ಟಡವೆಲ್ಲ ಇದೇ ಅಡಿಗಲ್ಲಿನ ಮೇಲೆಯೆ ನಿಂತಿದೆ. ಮತವೈಷಮ್ಯವೇ ನಮ್ಮ ನಾಗರಿಕತೆಯ ಅಧಃಪತನದ ಮುಖ್ಯ ಕಾರಣ ವಾಗಿದೆ. ಇಂದು ಭಾರತದಲ್ಲಿ ಪರಸ್ಪರ ಭಿನ್ನವಾಗಿರುವ ಜಾತಿಗಳು ಮೂರು ಸಾವಿರಕ್ಕಿಂತ ಕಡಮೆಯಿಲ್ಲ. ಮೂಲತಃ ಈ ಜಾತಿಗಳು ಶ್ರಮವಿಭಜನೆಯ ಪ್ರಶ್ನೆಯನ್ನು ಬಿಡಿಸಲು ರಚಿತವಾದ, ಬೇರೆ ಬೇರೆ ಕಾರ್ಮಿಕರ ಹಾಗು ಶಿಲ್ಪಿ ಗಳ ಸಮಾಜಗಳಾಗಿದ್ದುವು. ಆದರಿಂದು ಪ್ರತಿಯೊಂದು ಸಮಾಜವು ಉಳಿದ ಸಮಾಜಗಳಿಂದ ಬೇರ್ಪಟ್ಟು ಸ್ವತಂತ್ರವಾಗಲು ಪ್ರಯತ್ನಿಸುತ್ತಿದ್ದು ಉಳಿದು ವುಗಳೊಂದಿಗೆ ದ್ವೇಷಾಸೂಯೆಗಳ ಭಾವನೆಗಳನ್ನು ಬೆಳೆಸುತ್ತಿದೆ. ಹೀಗೆ ಸಮಾಜವೆಲ್ಲ ಶೈಥಿಲ್ಯದ ಕಡೆಗೆ ಭರದಿಂದ ಸಾಗಿದೆ. ಈ ಅನಿಷ್ಟವು ಶೀಘ್ರ ವಾಗಿಯೆ ನಿಂತುಹೋಗುವ ಸಮಯವು ಒದಗಿಬಂದಿದೆ. ನಿಸರ್ಗವು ಈ ಅನಿಷ್ಟವನ್ನು ಕೊನೆಗಾಣಿಸಲು ಕಾರ್ಯತತ್ಪರವಾಗಿದೆ. ಕಾಲನ ಕುಠಾರವು ನಿಷ್ಕರುಣವಾದುದು. ಈ ಮಾತು, ಜಾತಿದ್ವೇಷಕ್ಕೆ ಉತ್ಸಾಹದಿಂದ ಉತ್ತೇ-ಜನ ಕೊಡುವವರಿಗೂ ಮತದ್ವೇಷ ಪ್ರತಿಪಾದಕರಿಗೂ ಎಚ್ಚರಿಕೆಯಾಗಿ ನಿಲ್ಲಲಿ. ಅವರು ಸಕಾಲಕ್ಕೆ ತಿದ್ದಿಕೊಳ್ಳದಿದ್ದರೆ ಅದರ ದುಷ್ಪರಿಣಾಮಗಳಿಂದ

ತಪ್ಪಿಸಿಕೊಳ್ಳಲಾರರು. ಭಗವದಿಚ್ಛೆಯು ನೆರವೇರಿಯೇ ತೀರುವುದು. ಕಲುಷಿತಮನೋವೃತ್ತಿಯು ಎಲ್ಲಕ್ಕೂ ದೊಡ್ಡ ಅನಿಷ್ಟ— ಅದೇಕೆ, ಆಧ್ಯಾತ್ಮ ಜೀವನಕ್ಕೆ ಮಾರಕವಾದ ವಿಷವಾಗಿದೆ. ಅದು ಮನುಷ್ಯನ ವಿಶಾಲ ದೃಷ್ಟಿಯನ್ನು ಲೋಪಗೊಳಿಸಿ ಆತನನ್ನು ತನ್ನ ಮಟ್ಟಿಗೇ ಬಂಧಿತನನ್ನಾಗಿಡುತ್ತದೆ. ಅದಕ್ಕೆ ಅಂಟಿಕೊಂಡವರಲ್ಲಿ ಸಂಕುಚಿತ ಮನಸ್ಸನ್ನು ಹುಟ್ಟಿಸಿ ಅವರ ಪ್ರಗತಿಯ ಎಲ್ಲ ಪ್ರತ್ಯಾಶೆಯನ್ನೇ ಕಳೆದುಬಿಡುತ್ತದೆ. ಕಲುಷಿತ ಮನೋವೃತ್ತಿಯು ಅನ್ಯರ ಬಗ್ಗೆ ದ್ವೇಷವನ್ನು ಬೆಳೆಸುವುದಲ್ಲದೆ ಅದು ಪ್ರಚ್ಛನ್ನರೀತಿಯಲ್ಲಿ ಆತ್ಮ ಪ್ರತಿಷ್ಠೆಯ ಸುಳ್ಳು ಭಾವನೆಯೇ ಆಗಿದೆ. ಈ ಅನಿಷ್ಟವನ್ನು ನೀವು ಪೋಷಿಸಿದರೆ ಈಗಿರುವ ಅಹಂಕಾರದ ಸರಪಣಿಗೆ ಒಂದು ಹೆಚ್ಚಿನ ಕೊಂಡಿಯನ್ನು ಜೋಡಿಸಿದಂತಾಗುವುದು. ಆದರ ಪರಿಣಾಮವಾಗಿ ನೀವು ಸತ್ಯದಿಂದ ಬಹು ದೂರ ಉಳಿದುಕೊಳ್ಳುತ್ತೀರಿ. ಹೀಗೆ ಅನಂತದ ಸಾಕ್ಷಾತ್ಕಾರವು ಅಸಂಭವವಾಗಿಬಿಡುತ್ತದೆ. ಧರ್ಮದ ಮೂಲ ಆಧಾರವಾದ ವಿಶ್ವಪ್ರೇಮವು ಮಾಯವಾಗಿದ್ದು, ಸಾಮಾನ್ಯವಾಗಿ ಜೀವೇಶ್ವರರನ್ನು ಕೂಡಿಸುವ ಕೊಂಡಿಯೆಂದು ತಿಳಿಯಲಾದ ಧರ್ಮವು ಈಗ ಪ್ರತಿಬಂಧವಾಗಿ ನಿಂತಿದೆ. ಯಾವುದಾದರೊಂದು ಪದ್ಧತಿಯ ಅಥವಾ ಪೂಜಾಸ್ವರೂಪದ ನಿಜವಾದ ಮಹತ್ತ್ವವನ್ನೂ ಚರಮ ಗುರಿಯನ್ನೂ ಕುರಿತು ನಿಚ್ಚಳವಾದ ಕಲ್ಪನೆಯಿಲ್ಲದೆ ನಾವು ಅದಕ್ಕೆ ಅಂಟಿಕೊಂಡದ್ದಾದರೆ ಬಲು ದೊಡ್ಡ ತಪ್ಪನ್ನು ಮಾಡಿದಂತೆ. ದೇವರು ಒಂದು ವಿಶಿಷ್ಟ ಧರ್ಮದ ಅಥವಾ ಮತದ ಕಟ್ಟಿನಲ್ಲಿ ದೊರೆಯಲಾರನು. ಆತನು ಕೆಲವೊಂದು ಸಂಪ್ರದಾಯಗಳಲ್ಲಾಗಲಿ ಶಾಸ್ತ್ರಗಳಲ್ಲಾಗಲಿ ಸಿಕ್ಕಲಾರನು. ನಮ್ಮ ಹೃದಯಾಂತರಾಳದಲ್ಲಿಯೇ ನಾವು ಆತನನ್ನು ಹುಡುಕಬೇಕು.

ದೇವರ ಬಗೆಗೆ ವಿಧವಿಧವಾದ ಕಲ್ಪನೆಗಳಿರುವವು. ಜನರು ತಮ್ಮ ತಮ್ಮ ಗ್ರಹಣಶಕ್ತಿ ಹಾಗು ಬುದ್ಧಿಶಕ್ತಿಗಳಿಗನುಸಾರವಾಗಿ ಆತನನ್ನು ಬೇರೆ ಬೇರೆಯಾಗಿ ತಿಳಿಯುತ್ತಾರೆ. ಸರ್ವಸಾಮಾನ್ಯವಾಗಿ ಸ್ವೀಕೃತವಾದ ಗ್ರಹಿಕೆಯೆಂದರೆ ದೇವರು ಚಿರಂತನ ಶಕ್ತಿಯೆಂಬುದು. ಆದರೆ ತಾತ್ತ್ವಿಕ ದೃಷ್ಟಿಯು ಇದಕ್ಕಿಂತಲೂ ಮುಂದುವರಿದು, ಎಲ್ಲ ಭೇದಗಳನ್ನೂ ಬಹುತ್ವವನ್ನೂ ಮೀರಿದ ನಿರ್ಗುಣಬ್ರಹ್ಮವನ್ನು ಅಥವಾ ನಿರ್ಣಯಾತೀತ ಕೇವಲ ತತ್ತ್ವವನ್ನು

ಒಳಗೊಳ್ಳುತ್ತದೆ. ಅದು ಅಸ್ತಿತ್ವದ ಅಧಿಷ್ಠಾನವೂ ಮೂಲ ಕಾರಣವೂ ಆಗಿದ್ದು ಸಕಲ ವ್ಯಕ್ತಸೃಷ್ಟಿಯ ಅತಿಕ್ರಿಯಾತ್ಮಕ ಕೇಂದ್ರ ಅಥವಾ 'ಮೂಲಾಧಾರ' ವಾಗಿದೆ. ಅದು ಗುಣ, ಕ್ರಿಯೆ, ಚೇತನಗಳ ಆಚೆಗಿದೆ. ಅದನ್ನು 'ಪರಬ್ರಹ್ಮ'ವೆಂದೂ ಹೇಳುತ್ತಾರೆ. ಇದಾದ ಮೇಲೆ, ದೇವರು ಸರ್ವಶ್ರೇಷ್ಠ ಸತ್ ಎಂಬ ಕಲ್ಪನೆ ಬರುವುದು. ನಾವು ಜಗತ್ತಿನ ನಾನಾತ್ವವನ್ನೂ ವೈವಿಧ್ಯವನ್ನೂ ನೋಡಿ ಅದಕ್ಕೊಬ್ಬ ಕರ್ತೃ ಹಾಗು ನಿಯಾಮಕನಿರುವುದಾಗಿ ನಂಬುವೆವು. ಅವನನ್ನು ಈಶ್ವರ ಅಥವಾ ಸಗುಣ ಬ್ರಹ್ಮನೆಂದು ಕರೆಯುವೆವು. ಆತನು ನಿರಾಕಾರ ಚಿರಂತನ ಸತ್ತೆಯುಳ್ಳ-ವನೂ, ಸರ್ವಶಕ್ತನೂ ಸರ್ವಜ್ಞನೂ ಸಕಲ ಶ್ರೇಷ್ಠಸದ್ಗುಣಗಳನ್ನುಳ್ಳವನೂ ಎಂದು ಬಗೆಯುವೆವು. ಆತನು ಜಗತ್ತಿನ ಮೂಲ ಕಾರಣನಾಗಿದ್ದು ಅದರ ಸ್ಥಿತಿಲಯಗಳಿಗೂ ಕರ್ತೃವಾಗಿದ್ದಾನೆ. ಈ ಕೆಳಮಟ್ಟದ ದೃಷ್ಟಿಯಿಂದ ನೋಡಿದಾಗಲೆ ದೇವರು (ಧರ್ಮದ ದೇವರು) ಪೂಜ್ಯನಾಗಿ, ಬಹುಶಃ ಎಲ್ಲ ಧರ್ಮಗಳ ಅಂತಿಮ ಧ್ಯೇಯನಾಗುತ್ತಾನೆ. ಇದುವರೆಗೆ, ದೇವರು ನಿರಾಕಾರನಾಗಿದ್ದು ಹಲವು ಗುಣಗಳನ್ನುಳ್ಳವನಾಗಿರುವನೆಂದು ತಿಳಿಯಲಾಯಿತು. ಈ ಭಾವನೆಯು ಕೂಡ ಜನಸಾಮಾನ್ಯರಿಗೆ ಗ್ರಹಿಸಲು ಕಠಿಣವಾಗಿದೆ. ಆದುದರಿಂದ ಅವರು ಹೆಚ್ಚು ಸ್ಥೂಲವಾದ ರೂಪವೊಂದನ್ನು ತೆಗೆದುಕೊಂಡು ಸುಲಭವಾದ ಮಾರ್ಗವನ್ನು ಕಂಡುಕೊಳ್ಳಲು ಯತ್ನಿಸುವರು ಅಂತೆಯೆ ಕೆಲವರು, ಆತನು ಎಲ್ಲಕ್ಕೂ ಮೇಲಿನ ಸ್ವರ್ಗದಲ್ಲಿ ಕುಳಿತುಕೊಂಡು ಎಲ್ಲರಿಗೂ ದಯೆ ಹಾಗು ನ್ಯಾಯದಾನವನ್ನು ಮಾಡುವನೆಂದು ತಿಳಿಯುತ್ತಾರೆ. ಮತ್ತೆ ಕೆಲವರು ಆತನನ್ನು ಸರ್ವವ್ಯಾಪಿಯಾದ ವಿಶ್ವನಿಯಾಮಕ ಶಕ್ತಿಯೆಂದು ಬಗೆಯುವರು. ಈ ರೀತಿ, ನಾವು ಒಂದು ಬಗೆಯಾಗಿ ಕ್ರಮಶಃ ನಿರಾಕಾರದೃಷ್ಟಿಯಿಂದ ಸ್ಥೂಲತರವಾದ ಸಾಕಾರದ ಕಡೆಗೆ ಜಾರಿ ಬರುತ್ತಿದುವೆವು. ಧಾರ್ಮಿಕ ಗ್ರಂಥಗಳಲ್ಲಿ ಸಾಕಾರ ಹಾಗು ನಿರಾಕಾರ— ಇವೆರಡೂ ಕಲ್ಪನೆಗಳನ್ನು ಕುರಿತು ಸಾಕಷ್ಟು ಹೇಳಲಾಗಿದೆ. ಆದರೂ ಸಾಮಾನ್ಯವಾಗಿ ಗ್ರಹಿಸಲಾದ ಇವೆರಡೂ ಕಲ್ಪನೆಗಳು ತುಂಬ ದಿಗ್‌ಭ್ರಮೆಗೊಳಿಸುವಂಥವು. ನಿಜವಾಗಿಯೂ ದೇವರು ನಿರಾಕಾರನಾಗಲಿ ಸಾಕಾರನಾಗಲಿ ಇರದೆ ಇವೆರಡರ ಆಚೆಗಿದ್ದಾನೆ. ಆತನನ್ನು ಸಾಕಾರನೆಂದು ತಿಳಿಯುವವರು ಅತೀವ

ನನ್ನು ನಾಮ-ರೂಪಗಳಲ್ಲಿ ಸೀಮಿತಗೊಳಿಸುವರು. ತತ್ಪರಿಣಾಮವಾಗಿ ಅವರು ಸಂಕುಚಿತ ಮನಸ್ಸನ್ನು ಬಲಿಸಿಕೊಂಡು ಕೊನೆಯುವರೆಗೂ ಬಂಧನ ದಲ್ಲಿಯೆ ಉಳಿಯುವರು. ನಾವು ಆತನನ್ನು ನಿರಾಕಾರನೆಂದು ಭಾವಿಸಿ ದರೆ, ಅದು ನಮ್ಮ ಮನಸ್ಸಿನಲ್ಲಿ ಸೃಷ್ಟಿ-ಸ್ಥಿತಿ-ಲಯಃಕರ್ತೃವಿನ ಗುಣಗಳ ಎಲ್ಲೆಯನ್ನು ತರುತ್ತದೆ. ದೇವರು ಒಂದು ಬಲ ಅಥವಾ ಶಕ್ತಿಯೆಂಬ ಭಾವ ನೆಯು ಕೂಡ ಸೀಮಿತವಾದುದೆ. ನಾವು ಮುಂದೆ ಅಸತ್ ಅಥವಾ ಶೂನ್ಯದ ಕಡೆಗೆ ಸಾಗುವೆವು. ಆದರೂ ನಾವು ಒಂದು ರೀತಿ ಸತ್ಯದಿಂದ ಸಲ್ಪ ಮಟ್ಟಿಗೆ ದೂರವಾಗಿಯೆ ಇರುವೆವು. ಹಾಗಾದರೆ ಮತ್ತೇನು? ಶಬ್ದವು ಈಗ ಅಸಮರ್ಥ ವಾಗುವುದು. ಇವೆರಡೂ ಕಲ್ಪನೆಗಳಿಂದ ನಾವು ನಿಜವಾಗಿಯೂ ದೂರ ವಾದಾಗ ಮಾತ್ರ ಸರಿಯಾದ ದಾರಿಯನ್ನು ಹಿಡಿದಿರುವೆವೆಂದಿಷ್ಟೇ ಹೇಳಿದರೆ ಸಾಕು. ಎಲ್ಲಿಯ ವರೆಗೆ ನಾವು ಧರ್ಮದ ಕಟ್ಟಿನಲ್ಲಿ ಬಂಧಿತರಾಗಿರುವೆವೊ ಅಲ್ಲಿಯವರೆಗೆ ಧರ್ಮದ ದೇವರೆ ನಮ್ಮ ದೃಷ್ಟಿಯಲ್ಲಿರುವನು; ಹಾಗು ನಾವು ಒಂದಿಲ್ಲೊಂದು ಕಲ್ಪನಾಜಾಲದಲ್ಲಿ ಸಿಕ್ಕಿಬೀಳುವೆವು. ಇವುಗಳಾಚೆ ನಾವು ಹೋದಾಗಲೆ ಅತ್ಯುಚ್ಚ ಆಧ್ಯಾತ್ಮಿಕ ಸಿದ್ಧಿಯು ಸಾಧ್ಯವಾಗುವುದು. ನಿಜ ವಾದ ಸಂಗತಿಯೆಂದರೆ, ಧರ್ಮವು ಕೊನೆಗೊಂಡಲ್ಲಿ ಅಧ್ಯಾತ್ಮವು ಪ್ರಾರಂಭ ವಾಗುವುದು. ಧರ್ಮವು, ಸ್ವಾತಂತ್ರ್ಯದ ಮಾರ್ಗದಲ್ಲಿ ಮುನ್ನಡೆಯಲು ಮಾನವ ನನ್ನು ಸಿದ್ಧಗೊಳಿಸುವ ಆರಂಭದ ಒಂದು ಮಜಲು ಮಾತ್ರ. ಆ ದಾರಿ ಯಲ್ಲಿ ಆತನು ಹೆಜ್ಜೆಯಿಟ್ಟಾಗ ಧರ್ಮದ ಮೇರೆಗಳನ್ನು ದಾಟಿಹೋಗುವನು. ಧರ್ಮದ ಕೊನೆಯೆ ಅಧ್ಯಾತ್ಮದ ಆರಂಭ; ಅಧ್ಯಾತ್ಮದ ಕೊನೆಯೆ ಸತ್ಯದ ಆರಂಭ; ಹಾಗು ಸತ್ಯದ ಕೊನೆಯೆ ನಿಜವಾದ ಆನಂದ. ಅದೂ ಹೊರಟು ಹೋದಾಗ ನಾವು ಗುರಿಯನ್ನು ಮುಟ್ಟುವೆವು. ಅದೇ, ಶಬ್ದಗಳಿಗೆ ನಿಲುಕದ ಅತ್ಯುನ್ನತ ಗುರಿಯಾಗಿದೆ.

ಬೇರೆ ಬೇರೆ ಸ್ವರೂಪದಲ್ಲಿ ದೇವ-ದೇವತೆಗಳ ಪೂಜೆಯು ಅದೇ ಸಾಕಾರ ಸಿದ್ಧಾಂತದ ಒಂದು ಸ್ಥೂಲವಾದ ಬೆಳವಣಿಗೆಯಾಗಿದೆ. ನಿಸರ್ಗದ ಪ್ರತಿಯೊಂದು ಶಕ್ತಿಯು, ಹಾಗು ಪರ್ವತ, ನದಿ ಮತ್ತು ಗಿಡಗಳ ಪೂಜೆ ಯಾದರೂ ಅದೇ ದೃಷ್ಟಿಕೋನದ ಹೆಚ್ಚಿನ ಅವನತಿಯಾಗಿದೆ. ಎಂತಹ ಕರುಣಾಜನಕ ಸ್ಥಿತಿಯಿದು! ಒಡೆಯನನ್ನು ಪೂಜಿಸುವುದರ ಬದಲು, ನಾವು

ಆತನನ್ನು ಸಂಪೂರ್ಣವಾಗಿ ದುರ್ಲಕ್ಷಿಸಿ ಆತನ ಸೇವಕರನ್ನು ಪೂಜಿಸುತ್ತಿರು ವೆವು; ಮತ್ತು ನಮ್ಮ ಪೂರ್ವಕಲ್ಪಿತ ಗ್ರಹಿಕೆಗಳ ವಿರುದ್ಧವಾಗಿ ನಾವು ಏನನ್ನೂ ಕೇಳಲು ಸಿದ್ಧರಾಗಿಲ್ಲ. ಇದರ ಪರಿಣಾಮವಾಗಿ ನಾವಿಂದು, ತಂತಮ್ಮ ವಿಶಿಷ್ಟ ರೀತಿಯಲ್ಲಿ ದೇವಿ-ದೇವತೆಗಳನ್ನು ಪೂಜಿಸುತ್ತಿರುವ ಅನೇಕಾನೇಕ ಮತ-ಪಂಥಗಳನ್ನು ಕಾಣುತ್ತಿದ್ದೇವೆ. ಅವರ ಕಣ್ಣಮುಂದಿನ ಗುರಿಯು ಮೋಕ್ಷವೂ ಆಗಿರದೆ, ಅನೇಕ ಸಲ ಯಾವುದೊಂದು ಪ್ರಾಪಂಚಿಕ ಲಾಭವಾಗಲಿ ಒಂದು ವಿಶಿಷ್ಟ ದುಃಖದಿಂದ ಬಿಡುಗಡೆ ಹೊಂದುವುದಾಗಲಿ ಇರುವುದೆಂಬುದು ಸ್ಪಷ್ಟ. ಪರಿಸ್ಥಿತಿವಶರಾಗಿ, ಇಲ್ಲವೆ ಆತ್ಮ ಸಾಕ್ಷಾತ್ಕಾ ರದ ಬಗೆಗೆ ತಮಗೇ ತಿಳಿವಳಿಕೆಯಿಲ್ಲದವರ ತಪ್ಪು ಮಾರ್ಗದರ್ಶನದ ಮೂಲಕ ವಾಗಿ ಜನರು ಈ ವಿಧದ ಪೂಜೆಗಳನ್ನವಲಂಬಿಸಲು ವಿವಶರಾಗುತ್ತಾರೆ. ದೇವತೆಗಳ ಪೂಜೆಯು ಅವರವರ ಸೀಮಿತವಾದ ಕ್ಷೇತ್ರಕ್ಕೊಯ್ಯುವುದೆಂದೂ ಅದು ಮೋಕ್ಷಕ್ಕಿಂತ ತೀರ ಕೆಳಮಟ್ಟದ್ದೆಂದೂ ಗೀತೆಯಲ್ಲಿ ಶ್ರೀ ಕೃಷ್ಣನು ಸ್ಪಷ್ಟಗೊಳಿಸಿದ್ದಾನೆ. ದೇವತೆಗಳಿಗೇ ತಮ್ಮ ವಲಯದಾಚೆಗೆ ಹೋಗುವ ಸಾಮರ್ಥ್ಯವಿಲ್ಲ. ಆದುದರಿಂದ ಅವರ ಭಕ್ತರು ಅದನ್ನು ಮೀರಿ ಹೋಗುವ ಪ್ರಶ್ನೆಯೆ ಇಲ್ಲ. ಈ ಪ್ರಕಾರ ನಾವು ನಿಜವಾಗಿಯೂ ಸತ್ಯವನ್ನು ಲಕ್ಷ್ಯವ ನ್ನಾಗಿರಿಸಿಕೊಂಡ ಪಕ್ಷದಲ್ಲಿ ದೇವ-ದೇವತೆಗಳು ನಮಗೆ ಏನೂ ಸಹಾಯ ಮಾಡಲಾರರೆಂಬುದು ಸ್ಪಷ್ಟವಾಗುತ್ತದೆ. ಈ ವಿಷಯವನ್ನು ನಾನು ನನ್ನ 'Efficacy of Rajayoga' ಎಂಬ ಪುಸ್ತಕದಲ್ಲಿ ಹೆಚ್ಚು ಸ್ಪಷ್ಟಗೊಳಿಸಿ ದ್ದೇನೆ.

ಲೌಕಿಕ ಪ್ರಯೋಜನಗಳಿಗಾಗಿ ದೇವಿ-ದೇವತೆಗಳನ್ನಾಶ್ರಯಿಸುವ ಜನರು ಮಾಡುವ ಯಾಂತ್ರಿಕ ಸ್ವರೂಪದ ಪೂಜೆಯು ಇನ್ನೊಂದು ತರದ ಅಸಂಬದ್ಧ ಕಂತೆಯಾಗಿದೆ. ಅದು ಪೂಜೆಯೆ ಅಲ್ಲ. ಅಂಥವರು ಕೂಲಿ ಕಾರರ ಪಾತ್ರವನ್ನು ವಹಿಸಿದಂತಿದ್ದು ದಿನಗೆಲಸ ಮುಗಿದನಂತರ ತಮ್ಮ ಶಾರೀರಿಕ ಶ್ರಮಕ್ಕಾಗಿ ಕೂಲಿಯನ್ನು ಪಡೆಯುವರು. ಭಗವಂತನ ಸ್ಥೂಲ ಪ್ರಾಕೃತಿಕ ರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿ ಶ್ರದ್ಧೆ-ಭಕ್ತಿಗಳಿಂದ ಮಾಡುವ ಆರಾಧನೆಯು ಆಂತರಿಕ ಜಡತೆಯನ್ನು ಬೆಳೆಸುವುದು ಮತ್ತು ಈ ರೂಢಿಯು ಬಹಳ ದಿನಗಳ ವರೆಗೆ ಮುಂದುವರಿದರೆ ಅವರು ಹೆಚ್ಚು ಹೆಚ್ಚು

ಜಡರಾಗಿ ಸತ್ಯದ ಸಾಮೀಪ್ಯಕ್ಕೆ ತಡೆಯಾಗುವುದು. ಇಂಥವರ ಪರಿಣಾಮವು ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ಸ್ಪಷ್ಟವೇ ಆಗಿದೆ. ಜನಸಾಮಾನ್ಯಕ್ಕೆ, ನಿರಾಕಾರ ಬ್ರಹ್ಮನನ್ನು ( Immaterial Absolute ) ಪೂಜಿಸುವುದು ಆರಂಭದಶೆಯಲ್ಲಿ ಕಠಿಣವಾಗುವುದೆಂದು ತಿಳಿದು ಪ್ರಾಚೀನ ಋಷಿಗಳು ಅವರ ಉನ್ನತಿಗಾಗಿ ಒಂದು ಸುಲಭಸಾಧನವನ್ನು ಕಂಡು ಹಿಡಿದರು. ಸಾಮಾನ್ಯ ಜನರು ಸುಲಭವಾಗಿ ಗ್ರಹಿಸುವ, ಅವರ ಕಣ್ಣಿಗೆ ಕಾಣಿಸುವ ಯಾವುದಾದರೊಂದು ಘನವಸ್ತುವನ್ನು ತೆಗೆದುಕೊಂಡು ಅವರು (ಆರಾಧನೆಯನ್ನು) ಪ್ರಾರಂಭಿಸಿದರು. ಬೇರೆ ಬೇರೆ ಜನರಿಗೆ ಸುಲಭವಾಗಿ ಗ್ರಹಿಕೆಯಾಗುವ ವಸ್ತುಗಳು ಬೇರೆಬೇರೆಯಾಗಿದ್ದುವು. ಅತ್ಯಂತ ಕೆಳಮಟ್ಟದ ಜನರಿಗಾಗಿ ರೂಪುಳ್ಳ ಘನವಸ್ತುವನ್ನಿಟ್ಟರು. ಅವರಿಗಿಂತ ಮುಂದುವರಿದ ಬೇರೆಯವರಿಗೆ ಯಾವುದೊಂದು ವಿರಲರೂಪವನ್ನು, ಉದಾಹರಣೆಗಾಗಿ-ಪ್ರಭೆ, ಪ್ರಕಾಶ ಅಥವಾ ಯಾವುದಾದರೂ ಭಗವದ್ಗುಣವನ್ನು ಪ್ರಾರಂಭದಲ್ಲಿ ಕೊಡಲಾಗುತ್ತಿತ್ತು. ತುಂಬ ಸುಸಂಸ್ಕಾರವನ್ನು ಹೊಂದಿದ ಮನಸ್ಸಿಗೆ ದೇವರ ಒಂದು ಸೂಕ್ಷ್ಮವಾದ ಕಲ್ಪನೆಯೆ ಸಾಕಾಗುತ್ತಿತ್ತು. ಆದುದರಿಂದ ತೀರ ಕೆಳಮಟ್ಟದ ಜನರಿಗೆ ಮಾತ್ರ ಜಡರೂಪದಲ್ಲಿ ಚಿತ್ರವನ್ನಾಗಲಿ ಮೂರ್ತಿಯನ್ನಾಗಲಿ— ಅದೂ ತಾತ್ಪೂರ್ತಿಕ ಯೋಜನೆಯಾಗಿ— ಕಲ್ಪಿಸಿದ್ದರು. ಅವರು ಸ್ವಲ್ಪ ಮುಂದುವರಿದ ನಂತರ ಅದನ್ನು ಬಿಟ್ಟುಕೊಟ್ಟು ಅದಕ್ಕಿಂತಲೂ ಸೂಕ್ಷ್ಮವಾದ ರೂಪವನ್ನು ತೆಗೆದುಕೊಂಡು ಎರಡನೆಯ ಹಂತದಲ್ಲಿ ಕಾಲಿರಿಸುತ್ತಿದ್ದರು. ಇದು, ಅಚ್ಚಾದ ಅಕ್ಷರಗಳ ಮೇಲೆ ಮಗುವಿಗೆ ತೀಡಲು ಹಚ್ಚಿ ಬರೆಹವನ್ನು ಕಲಿಸಿದಂತೆ. ಸ್ವಲ್ಪ ಅಭ್ಯಾಸವಾದ ಮೇಲೆ ಈ ಪದ್ಧತಿಯನ್ನು ಬಿಟ್ಟು ಅಚ್ಚಿನ ಅಕ್ಷರಗಳ ಸಹಾಯವಿಲ್ಲದೆ ಮಗುವು ಸ್ವತಂತ್ರವಾಗಿ ಬರೆಯಬಲ್ಲದು. ಇದೇ ರೀತಿ, ಮೂರ್ತಿ ಅಥವಾ ಘನ ಆಕೃತಿಯನ್ನು, ಪ್ರಾರಂಭದಶೆಯವರು ಕೆಲಕಾಲದವರೆಗೆ ಮಾತ್ರ ಸ್ವೀಕರಿಸಬೇಕಾಗುತ್ತಿದ್ದು, ಆಮೇಲೆ ಅವರು ಮುಂದಿನ ಮೆಟ್ಟಲಿಗೆ ಬರುತ್ತಿದ್ದರು. ಅಲ್ಲದೆ ಈ ಉದ್ದೇಶದಿಂದ ಇಡಲಾದ ಮೂರ್ತಿಯನ್ನು ಆಧ್ಯಾತ್ಮಿಕ ಶಕ್ತಿಯಿಂದ ತುಂಬಲಾಗುತ್ತಿತ್ತು. ಇದರಿಂದ ಆ ಶಕ್ತಿಯು ಸತತವಾಗಿ ವಿಕಿರಣಗೊಂಡು ಅದರ ಅಲ್ಪಾಂಶವನ್ನು ಮೂರ್ತಿಯ ಹತ್ತಿರ ಪೂಜೆಗಾಗಿ ಭಕ್ತಿಯಿಂದ ಕುಳಿತುಕೊಂಡವರು ಕೂಡ

ಪಡೆಯುತ್ತಿದ್ದರು. ಇಂದು, ಪ್ರಾಣ ಪ್ರತಿಷ್ಠಾಪನಕಾರ್ಯವು ಕೇವಲ ಸಂಪ್ರದಾಯವಾಗಿ ನಡೆಯುವುದಾದರೂ ಮೂರ್ತಿಯಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ತುಂಬಬಲ್ಲ ಉಚ್ಚಕೋಟಿಯ ಮಹನೀಯರು ತೀರ ವಿರಳರಾಗಿದ್ದಾರೆ. ಇದರ ಪರಿಣಾಮವೆಂದರೆ, ಸಾವಿರಾರು ವರುಷಗಳ ಹಿಂದೆ ಈ ರೀತಿ ದಿವ್ಯ ಶಕ್ತಿಯಿಂದ ತುಂಬಲ್ಪಟ್ಟ ಮೂರ್ತಿಗಳೂ ಸ್ಥಾನಗಳೂ ಇಂದು ತಮ್ಮ ಪ್ರಭಾವವನ್ನು ಕಳೆದುಕೊಂಡಂತಾಗಿ, ಉಪಾಸನೆ-ಪೂಜೆಗಳಿಗೆಂದು ಅಲ್ಲಿಗೆ ಹೋಗುವವರು ಯಾವ ಲಾಭವನ್ನೂ ಪಡೆಯುವುದಿಲ್ಲ. ಅಂತೂ ಯಾರು ಭಗವಂತನನ್ನು ಬೇರೆ ಯಾವ ವಿಧದಿಂದಲೂ ಆರಾಧಿಸಲು ಸಮರ್ಥರಿದ್ದಿಲ್ಲವೋ ಅಂತಹ ಅತ್ಯಲ್ಪ ಬುದ್ಧಿಯುಳ್ಳ ಕೆಳಮಟ್ಟದ ಜನರಿಗಾಗಿ ಮಾತ್ರ ಈ ಪದ್ಧತಿಯು ಪ್ರಾರಂಭಿಸಲ್ಪಟ್ಟಿತೆಂಬುದು ನಿಸ್ಸಂದೇಹವಾಗಿದೆ. ಈ ಅಭ್ಯಾಸವನ್ನು ಕೊನೆಯವರೆಗೂ ಛಲದಿಂದ ಮುಂದುವರಿಸಿದುದಾದರೆ, ನಿಶ್ಚಿತವಾಗಿ ಅದರ ಮೂಲ ಉದ್ದೇಶವೇ ವಿಫಲವಾಗಿ ಯಾವ ಆಧ್ಯಾತ್ಮಿಕ ಲಾಭವೂ ಆಗುವುದಿಲ್ಲ. ಈ ಕಲ್ಪನೆಯನ್ನು ಸಂತ ಕಬೀರನು ಬಲು ಸುಂದರವಾಗಿ ಕೆಳಗಿನ ಸಾಲುಗಳಲ್ಲಿ ಈ ರೀತಿ ವರ್ಣಿಸಿದ್ದಾನೆ:

ಪಾಹನ ಪೂಜೇ ಹರಿ ಮಿಲೇ, ತೋ ಪೂಜಿಯೆ ಪಹಾಡ ।
ತಾತೇ ಯಹ ಚಕ್ಕೀ ಭಲೀ, ಪೀಸ ಖಾಯ ಸಂಸಾರ ॥

"ಕಲ್ಲನ್ನು ಪೂಜಿಸುವುದರಿಂದ ದೇವರು ಸಿಗುವಂತಿದ್ದರೆ, ಪರ್ವತವನ್ನೇ ಪೂಜಿಸಿರಿ. ಆದರೆ ಅದಕ್ಕಿಂತ ಬೀಸುವಕಲ್ಲೇ ಒಳಿತು; ಅದರಿಂದ ಪ್ರಪಂಚವೆಲ್ಲವೂ ಬೀಸಿಕೊಂಡು ಹೊಟ್ಟೆ ತುಂಬಿಕೊಳ್ಳುವುದು"

ನನ್ನ ದೃಷ್ಟಿಯಲ್ಲಿ, ಯಾರು ತಮ್ಮ ಜೀವನಾವಧಿ ಈ ವಿಧವಾದ ಪೂಜೆಗೆ ಅಂಟಿಕೊಂಡಿರುವರೋ ಅವರು ಅಸುರತ್ವದ ಪಂಕದಲ್ಲಿ ಆಳವಾಗಿ ಸಿಕ್ಕಿಬೀಳುತ್ತಿರುವರು. ಅದರಿಂದ ಅವರನ್ನು ಪಾರುಮಾಡುವುದು ಅತ್ಯಂತ ಕಠಿಣ ಕಾಲ ಕಳೆದಂತೆಲ್ಲ ಸತತವಾದ ಅಭ್ಯಾಸದಿಂದ ಅವರು ಅದರಲ್ಲಿ ಎಷ್ಟರಮಟ್ಟಿಗೆ ಸಿಲುಕಿಬಿಡುವರೆಂದರೆ, ಯಾವ ಸ್ಥಿತಿಯಲ್ಲಿಯೂ ಅದರಿಂದ ಪಾರಾಗುವ ಯೋಚನೆಯನ್ನು ಸಹ ಮಾಡಲಾರದವರಾಗಿ ಯಥಾಸ್ಥಿತರಾಗಿ ಉಳಿದು ಬಿಡುತ್ತಾರೆ. ತಾವು ಮೈಗೂಡಿಸಿಕೊಂಡ ಭಾವನೆಗಳನ್ನು ಬಿಟ್ಟುಕೊಡಲು ಅವರು ಇಷ್ಟಪಡುವುದಿಲ್ಲ; ಅವುಗಳಿಗೆ ತಮ್ಮ ಕಲ್ಪನಾಶಕ್ತಿಯನ್ನು ಜೋಡಿಸಿ ಅವುಗಳನ್ನು ಮತ್ತಷ್ಟು ಸಬಲವಾಗಿಯೂ ಘನವಾಗಿಯೂ ಮಾಡು

ತ್ತಾರೆ. ಪ್ರತಿಯೊಂದು ಪದಾರ್ಥವೂ ತನ್ನ ರೂಪಕ್ಕೆ ಸದೃಶವಾದ ರೀತಿ ಯಲ್ಲಿಯೇ ತನ್ನ ಪ್ರತಿಬಿಂಬವನ್ನು ಮೂಡಿಸುತ್ತದೆ. ವಸ್ತುವು ಸೂಕ್ಷ್ಮ ವಾಗಿದ್ದರೆ ಪ್ರತಿಬಿಂಬದ ರೂಪವೂ ಸೂಕ್ಷ್ಮವಾಗಿರುತ್ತದೆ. ಅದು ಜಡವಾಗಿ ದ್ದರೆ ಪ್ರತಿಬಿಂಬವೂ ಜಡವಾಗಿರುತ್ತದೆ. ನಾವು ಜಡಪದಾರ್ಥದ ಮೇಲೆ ಚಿತ್ತವನ್ನು ಏಕಾಗ್ರಗೊಳಿಸಿದರೆ ಅಂತರಂಗವು ಜಡವಾಗುವುದು ನಿಶ್ಚಿತ. ಪವಿತ್ರವಾದ ಶಾಸ್ತ್ರಗ್ರಂಥಗಳಿಂದ ತಾವು ಕಲಿತುದನ್ನೆಲ್ಲ ಸ್ಥೂಲರೂಪದಲ್ಲಿ ಅಜ್ಞರಾದ ಜನತೆಯ ಮುಂದಿಟ್ಟು, ಧರ್ಮಗುರುಗಳು ದೊಡ್ಡ ಅನರ್ಥವ-ನ್ನುಂಟುಮಾಡಿದ್ದಾರೆ. ಅದು ಮನಸ್ಸಿನ ವಿವೇಚನಶಕ್ತಿಯನ್ನು ನಾಶ ಮಾಡುತ್ತದೆ. ಯಾರಾದರೂ ಇಂಥ ಭಯಂಕರ ಸ್ಥಿತಿಯನ್ನು ಬಲಿಸಿ ಕೊಂಡರೆ ಅವರು ಕೊನೆಯವರೆಗೂ ನಷ್ಟರಾದಂತೆಯೆ. ಅವರು ವಿಶಾಲ ದೃಷ್ಟಿಗೆ ಎರವಾಗುವುದಲ್ಲದೆ, ಹೆಚ್ಚಿನ ಪ್ರಗತಿಯ ಶಕ್ತಿಯನ್ನೂ ಪೂರ್ತಿಯಾಗಿ ಕಳೆದುಕೊಳ್ಳುವರು. ತಮ್ಮ ಅಲ್ಪ ಕಾರ್ಯಕ್ಷೇತ್ರವನ್ನೇ ಸಾಕಷ್ಟು ದೊಡ್ಡ ದೆಂದು ಭಾವಿಸುವ ಕೂಪಮಂಡೂಕಗಳಿಗೆ ಇಂತಹ ಜನರನ್ನು ಹೋಲಿಸ ಬಹುದು. ಎಲ್ಲಕಡೆಗೂ ದಿಗ್ಬಂಧನಗೊಳಿಸಿದ ಸೀಮಿತವಾದ ವಲಯದ ಲ್ಲಿಯೆ ಅವರು ಸುತ್ತಾಡುತ್ತಿರುತ್ತಾರೆ. ತಮ್ಮ ಜೀವಮಾನದಲ್ಲೆಲ್ಲ ಅವರು ಅದೇ ವಸ್ತುವನ್ನೇ ಕಟೆಯುತ್ತ ಕೂಡುತ್ತಾರೆ. ದೇವತೆಗಳ ಕಥೆಗಳೂ ನಿದರ್ಶನಗಳೂ ಅಷ್ಟೇ ಅವರಿಗೆ ಸಾಕಾಗುವುವು. ಈ ಅಭ್ಯಾಸವು ಬಹಳ ದಿನಗಳ ವರೆಗೆ ಮುಂದುವರಿದರೆ ಮೆದುಳಿನ ಕೋಶಗಳ ಮೇಲೆ ಪರಿಣಾಮ ವಾಗಿ ದಿನದಿನಕ್ಕೂ ಬಲಿಯುತ್ತ ಹೋಗುವ ವಿಚಾರಗಳಿಂದಲೇ ಅವು ತುಂಬಿ ಹೋಗುವುವು. ಕೊನೆಗೆ ಇದರ ಪರಿಣಾಮವು ಇಡೀ ನರಮಂಡಲದ ಮೇಲೂ ಆಗುತ್ತದೆ. ಜಡತ್ವವು ಮೆಲ್ಲನೆ ಒಳಗೂ ಪಸರಿಸಿ ಪತನಕಾರ್ಯವನ್ನು ಪೂರ್ಣಗೊಳಿಸುತ್ತದೆ. ಅವರೀಗ ಅಂತರಂಗ ಬಹಿರಂಗಗಳಲ್ಲಿ ಪೂರ್ಣ ಅಭೇದ್ಯ ರಾಗಿ ದೈವೀಪ್ರಕಾಶದ ದಾರಿಯನ್ನು ತಡೆಯುತ್ತಾರೆ. ಅವರು ಅಂತರಾತ್ಮ ವನ್ನು ಸಮೀಪಿಸುವುದಕ್ಕೆ ಪೂರ್ಣವಾಗಿ ಪ್ರತಿಬಂಧವುಂಟಾಗುತ್ತದೆ. ನಾನು ಇಂಥವರನ್ನು 'ಜೀವಂತ ಶಿಲೆ'ಗಳೆಂದು ಕರೆಯಬಯಸುತ್ತೇನೆ. ಅವರು ಬೆಳೆಸಿಕೊಂಡ ಗಟ್ಟಿಯಾದ ಕೋಳೆಯು ಶ್ರೇಷ್ಠತರವಾದ ಅಥವಾ ಸೂಕ್ಷ್ಮತರ ವಾದ ವಸ್ತುವಿನ ಸಂಪರ್ಕದಿಂದ ಅವರನ್ನು ದೂರವಿಡುತ್ತದೆ. ಅದರ

ಪ್ರಭಾವವನ್ನು—ಅದು ಅಧ್ಯಾತ್ಮದಿಂದ ನಿಜವಾಗಿ ಬಹುದೂರವಾಗಿದ್ದರೂ-ಅಧ್ಯಾತ್ಮಿಕದಶೆಯೆಂದು ತಿಳಿದು, ಅದರಿಂದ ಮಂತ್ರಮುಗ್ಧರಂತೆ ಆಗಿಬಿಡುತ್ತಾರೆ. ಆಧ್ಯಾತ್ಮಿಕ ಸಾಧನೆಗಾಗಿ ನನ್ನ ಬಳಿ ಬರುವವರ ಹೃದಯಗಳಿಂದ ಇಂಥ ಅಭ್ಯಾಸದಿಂದುಂಟಾದ ಗಟ್ಟಿಕೊಳೆಯನ್ನು ನಿರ್ಮೂಲಮಾಡುವುದು ಬಲು ಕಠಿಣವಾದ ಮತ್ತು ಬೇಸರದ ಕೆಲಸವೆಂಬುದನ್ನು ಅಧ್ಯಾತ್ಮಕ್ಷೇತ್ರದಲ್ಲಿಯ ನನ್ನ ಅನುಭವವು ತೋರಿಸಿಕೊಟ್ಟಿದೆ. ಆತ್ಮದ ಈ ಬಂಧನಗಳಿಂದ ಬಿಡುಗಡೆಹೊಂದಬಯಸುವವರು, ಈ ನಿರರ್ಥಕವಾದ ಅಭ್ಯಾಸಗಳ ಪರಿಣಾಮವಾಗಿ ತಮ್ಮ ಮನಸ್ಸಿನ ಮೇಲೆ ಅಂಟಿಕೊಂಡ ಜಡತ್ವದ ಪದರುಗಳನ್ನು ತೆಗೆದುಹಾಕುವುದು ಅವಶ್ಯವಾಗಿದೆ.

ಹೆಚ್ಚು ಮುಂದುವರಿದುದೆಂದು ತಿಳಿಯಲಾದ ಇನ್ನೊಂದು ತರದ ಪೂಜೆಯೆಂದರೆ ಇಷ್ಟದೇವತೆಯ ಸ್ತುತಿಪರವಾದ ಗೀತಗಳನ್ನು ಸಾಮೂಹಿಕವಾಗಿ ಹಾಡುವುದು. ಜನರು ಗುಂಪುಗುಂಪಾಗಿ ಕೂಡಿ ನಟ್ಟಿರುಳಿನಲ್ಲಿ ಉಚ್ಚಧ್ವನಿಯಲ್ಲಿ ಸಾಮೂಹಿಕವಾಗಿ ಹಾಡಿ ರಾತ್ರಿಯ ಪ್ರಶಾಂತ ವಾತಾವರಣವನ್ನು ಕದಡಿ ಬಿಡುವರು. ಅವರು ಹೇಳುವಂತೆ, ಭಗವಂತನ ಪವಿತ್ರ ನಾಮವನ್ನು ಸಾಧ್ಯವಾದಷ್ಟು ಹೆಚ್ಚು ಜನರ ಕಿವಿಗೆ ಹಾಕುವ ಧಾರ್ಮಿಕ ಕಾರ್ಯವನ್ನು ನೆರವೇರಿಸುತ್ತಿರುವುದಾಗಿ ತಿಳಿದಿರುವರು. ಇಷ್ಟೇ ಅಲ್ಲ, ಕೆಲವು ವೇಳೆ ಅವರು ಧ್ವನಿಯನ್ನು ಪ್ರಸಾರಮಾಡಲು ಧ್ವನಿವರ್ಧಕ ಯಂತ್ರಗಳನ್ನು ಕೂಡ ಉಪಯೋಗಿಸುತ್ತಾರೆ. ದಿನದ ದುಡಿಮೆಯ ಅನಂತರವಾಗಲಿ, ಬೇನೆಬೇಸರಿಕೆಯ ಮೂಲಕವಾಗಲಿ ನಿಶ್ಶಬ್ದ ವಿಶ್ರಾಂತಿಯ ಆಗತ್ಯವಿರುವ ಅನೇಕರಿಗೆ ತಾವು ಅನನುಕೂಲತೆಯನ್ನೂ ಅಸೌಖ್ಯವನ್ನೂ ಉಂಟುಮಾಡುತ್ತಿರುವರೆಂಬುದನ್ನು ಅವರು ಸಂಪೂರ್ಣವಾಗಿ ಕಡೆಗಣಿಸುತ್ತಾರೆ. ಅಲ್ಲದೆ ರಾತ್ರಿಯ ಪ್ರಶಾಂತ ವೇಳೆಯಲ್ಲಿ ಧ್ಯಾನಮಾಡುವವರಿಗೆ ಅದು ಕಿರಿಕಿರಿಯನ್ನುಂಟುಮಾಡಬಹುದೆಂಬುದನ್ನೂ ಮರೆತು ಬಿಡುತ್ತಾರೆ. ಇದಲ್ಲದೆ, ಸಾಮಾನ್ಯವಾಗಿ ಇಂದು ಅನುಸರಿಸಲಾದ ಈ ಪದ್ಧತಿಯು ನಮ್ಮ ಆಧ್ಯಾತ್ಮಿಕ ಉನ್ನತಿಗೆ ಅಷ್ಟೇನೂ ಪ್ರಯೋಜನಕಾರಿಯಲ್ಲ. ಅಂತೆಯೆ ವಾಸ್ತವಿಕವಾಗಿ ಅದರಿಂದ ಯಾವ ಲಾಭವನ್ನೂ ಪಡೆಯಲಾಗುವುದಿಲ್ಲ. ಸಂಕೀರ್ತನಕಾರರ ಹಾಡುಗಳನ್ನು ಒಬ್ಬ ರೋಗಿಯ ನರಳುವಿಕೆಗೆ ಹೋಲಿಸಿದರೆ ಹೆಚ್ಚು

ಸಮಂಜಸವಾಗಬಹುದು. ಅಂಥ ನರಳುವಿಕೆಯು ಆತನಿಗೆ ತಾತ್ಕಾಲಿಕ ಸಮಾಧಾನವನ್ನು ಕೊಡಬಲ್ಲುದೇ ವಿನಾ ವೇದನೆಯಿಂದ ಆತನನ್ನು ಬಿಡುಗಡೆ ಮಾಡಲಾರದು. ಆದುದರಿಂದ, ಇಂಥ ಹಾಡುಗಳು ಸ್ವರಮಾಧುರ್ಯದಿಂದ ಕೂಡಿರುವ ಕಾರಣ ಹಾಡುವವರ ವಿಚಾರಗಳನ್ನು ಕ್ಷಣಕಾಲ ಧ್ಯೇಯದ ಕಡೆಗೆ ಸೆಳೆಯಬಲ್ಲುವಷ್ಟೇ ಹೊರತು ಇವುಗಳಿಂದ ಅವರಿಗೆ ಬೇರೇನೂ ಪ್ರಯೋಜನವಿಲ್ಲ. ನಾವು ಯಾವುದನ್ನು ಆಲೋಚಿಸುವೆವೋ ಅಥವಾ ಧ್ಯಾನಿಸುವೆವೋ ಅದು ನಮ್ಮೊಳಗೆ ಕಂಪನಗಳನ್ನು ಹುಟ್ಟಿಸುತ್ತದೆ. ಈ ಕಂಪನಗಳು ಹೆಚ್ಚುತ್ತ ಹೋದಂತೆಲ್ಲ ಅವುಗಳಿಂದ ಶಕ್ತಿಯು ಹುಟ್ಟಿ ಧ್ವನಿ ಯೊಡನೆ ಅದು ಹೊರಹೊಮ್ಮುತ್ತದೆ. ಕಂಪನಗಳು ಆಯಾ ವ್ಯಕ್ತಿಗಳ ಆಲೋಚನೆ ಮತ್ತು ಭಾವನೆಗಳ ಪರಿಣಾಮವನ್ನು ತಮ್ಮೊಡನೊಯ್ಯುತ್ತವೆ. ಆದುದರಿಂದ ಶುದ್ಧ ಮನಸ್ಸುಗಳ ಸತ್ಪರಿಣಾಮವನ್ನು ಗುಂಪಿನಲ್ಲಿಯ ಅಶುದ್ಧ ಮನಸ್ಸುಗಳ ದುಷ್ಪರಿಣಾಮವು ಕೆಡಿಸಿಬಿಡಬಹುದಾಗಿದೆ. ಆದಕಾರಣ ಈ ಕ್ರಿಯೆಗಳ ಸಂಪೂರ್ಣ ಲಾಭ ಪಡೆಯಬೇಕಾದರೆ ಇಂಥ ಅನಪೇಕ್ಷಿತವಾದ ಅಂಶಗಳನ್ನು ದೂರದಲ್ಲಿರಿಸಬೇಕು. ಚೈತನ್ಯ ಮಹಾಪ್ರಭುಗಳು ಈ ಪದ್ಧತಿ ಯನ್ನನುಸರಿಸುತ್ತಿದ್ದರು. ಧಾರ್ಮಿಕತೆ ಹಾಗೂ ಸಜ್ಜನಿಕೆಯಲ್ಲಿ ತಮಗೆ ಪೂರ್ಣ ಪರಿಚಿತರಾದ ಜನರನ್ನಷ್ಟೇ ಅವರು ಸಂಕೀರ್ತನೆಯಲ್ಲಿ ಸೇರಿಸಿಕೊಳ್ಳುತ್ತಿ-ದ್ದರು. ಸಂಕೀರ್ತನೆಯ ಕಾಲಕ್ಕೆ ಬಾಗಿಲುಗಳನ್ನು ಮುಚ್ಚಲಾಗುತ್ತಿದ್ದು ಹೊರಗಿನವರಾರನ್ನೂ ಒಳಗೆ ಬಿಡಲಾಗುತ್ತಿದ್ದಿಲ್ಲ. ನಿಜವಾಗಿ ನೋಡಿದರೆ, ಸಂಕೀರ್ತನೆಯು ( ಸಾಮುದಾಯಿಕ ಗೀತಗಾನವು ) ಪ್ರಾರಂಭಿಕ ಪ್ರಗತಿಗೆ ಸಾಧನವಾಗಿರದೆ ಸಾಕಷ್ಟು ಮುಂದುವರಿದ ಮೇಲೆಯೆ ಅದು ಸ್ವಲ್ಪಮಟ್ಟಿಗೆ ಸಹಾಯಕಾರಿಯಾಗುತ್ತದೆ. ಸದ್ಭಾವನೆಗಳಿಂದ ತುಂಬಿದ ಹಿತಕರವಾದ ವಾತಾವರಣದಲ್ಲಿ ನಡೆಸಿದರೆ ಮಾತ್ರ ಅದು ಅತ್ಯಂತ ಪರಿಣಾಮಕಾರಕ ವಾಗಬಲ್ಲುದು. ತೀಕ್ಷ್ಣವಾದ ಮಾನಸಿಕ ಸಾಧನಗಳ ಅನಂತರ ಇದರಿಂದ ಸ್ವಲ್ಪ ವಿರಾಮವೂ ದೊರೆಯಬಲ್ಲುದು. ದುರ್ದೈವದಿಂದ, ಇಂದು ಇಂಥ ಸಾಧನೆಗಳನ್ನು ಮಾಡುವಾಗ ಇರಿಸಿಕೊಳ್ಳಲಾದ ಆದರ್ಶವೂ ಅತ್ಯುನ್ನತ ವಾಗಿರುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಜನರು ಹೆಚ್ಚಾಗಿ ದೇವತೆಗಳ ಭೌತಿಕ ಶರೀರಗಳನ್ನು ಹಾಗು ಕಾರ್ಯಗಳನ್ನು ಕಣ್ಣೆದುರಿನಲ್ಲಿಟ್ಟುಕೊಂಡು

ಆ ದೇವತೆಗಳ ಶಾರೀರಿಕರೂಪದ ಕಲ್ಪನೆಯನ್ನೆ ಚಿಂತಿಸುತ್ತಿರುತ್ತಾರೆ. ಈ ಸ್ಥೂಲ ಮನೋವ್ಯಾಪಾರದ ಪರಿಣಾಮವೆಂದರೆ, ಸಾಧನದುದ್ದಕ್ಕೂ ಅವರು ಆಂತರಿಕ ಜಡತೆಯನ್ನು–ಸ್ಥೂಲತೆಯನ್ನು ಬೆಳೆಸಿಕೊಳ್ಳುತ್ತಾರೆ. ಸ್ಥೂಲ ಕಲ್ಪನೆಯು ನಿಮ್ಮನ್ನು ಅನಿವಾರ್ಯವಾಗಿ ಒಂದು ಸೀಮೆಯಲ್ಲಿ ಮತ್ತು ಬಂಧನದಲ್ಲಿಯೆ ಇಡುವುದು. ಆದುದರಿಂದ ಅಂತಿಮ ಧ್ಯೇಯಸಿದ್ಧಿಯು ಅಥವಾ ಕೇವಲಮುಕ್ತಿಯು ನಿಮಗೆಂದಿಗೂ ಸಾಧ್ಯವಾಗುವುದಿಲ್ಲ. ಆದುದರಿಂದಲೇ ಅನೇಕ ವರ್ಷಗಳ ಸಾಧನೆಯ ಅನಂತರವೂ ಇವರು ಸಿದ್ಧಿಯ ನಿಮ್ನಸ್ತರದಲ್ಲಿಯೆ ಉಳಿಯುವರು. ಜೀವಧಾರಣೆಗೆ ಅಗತ್ಯವಾದ ಪ್ರಾಣವಾಯುವು ಸಹ ಲಭಿಸದ, ನಿಂತ ನೀರಿನ ಹೊಂಡದಲ್ಲಿಯೆ ಎಲ್ಲವನ್ನೂ ಅರಸುವವರ ಗತಿ ಇವರದು. ಇಂಥ ಹೊಂಡವನ್ನು ಅವರು ತಮ್ಮ ನಿತ್ಯ ನಿವಾಸವನ್ನಾಗಿ ಮಾಡಿಕೊಂಡಿದ್ದಾರೆ. ಮುತ್ತುಗಳನ್ನಾಗಿ ಮಾರ್ಪಡಿಸಲು ತಕ್ಕಷ್ಟು ಬೆಳಕು ಬೇಕು. ಬಂಧನದಿಂದ ಸಂಪೂರ್ಣ ಬಿಡುಗಡೆಯನ್ನು ಪಡೆಯಲು ನಾವು ಮಾಡಬೇಕಾದ ಪ್ರಯತ್ನವೆಂದರೆ, ನಾವು ಲಘುತಮ ಹಾಗು ಸೂಕ್ಷ್ಮತಮವಾಗುತ್ತ ದೈವೀಗುಣಗಳನ್ನು ಹೋಲುತ್ತ ಭಗವಂತನೊಂದಿಗೆ ಸಂಪೂರ್ಣ ಸಾದೃಶ್ಯವನ್ನು ಹೊಂದಬೇಕು. ಈ ಕಾರ್ಯಕ್ಕೆ ಬೇಕಾದ ಮಟ್ಟಕ್ಕೆ ಯಾವನು ಏರಿಬರುವನೋ ಅವನಿಗೆ ಮಾತ್ರ ನಿಜವಾದ ಜೀವನಸುಧೆ ಲಭಿಸಬಲ್ಲುದು.

---

## ಅಧ್ಯಾಯ: ೨

# ಜೀವನದ ಗುರಿ

ಜೀವನದ ಸಮಸ್ಯೆಯನ್ನು ಕುರಿತು ಎಂದಾದರೂ ಗಂಭೀರವಾಗಿ ಪರ್ಯಾಲೋಚಿಸಿದವರು ಜನರಲ್ಲಿ ಪ್ರಾಯಃ ಬಹು ವಿರಳ. ಸಾಮಾನ್ಯವಾಗಿ ಅದನ್ನವರು ಸಂಕುಚಿತದೃಷ್ಟಿಯಿಂದ ಕಾಣುವರು. ಬೇಕಾದ ಸುಖ-ಸೌಕರ್ಯಗಳಿಂದೊಡಗೂಡಿದ ಚೊಕ್ಕಟವಾದ ಬಾಳನ್ನು ಸಾಗಿಸುವುದೇ ಅವರ ಮುಂದಿರುವ ಏಕಮೇವ ಸಮಸ್ಯೆಯಾಗಿರುತ್ತದೆ. ಬೇರೆ ಮಾತಿನಲ್ಲಿ ಹೇಳುವುದಾದರೆ ಜಗತ್ತಿನಲ್ಲಿ ಸಾಧ್ಯವಾದಷ್ಟು ಅತಿಹೆಚ್ಚು ಸುಖವನ್ನೂ ದೊಡ್ಡಿಸ್ತಿಕೆಯನ್ನೂ ದೊರಕಿಸುವುದೊಂದೇ ಅವರ ಧ್ಯೇಯವಾಗಿರುತ್ತದೆ. ಅದನ್ನು ತಾವು ದೊರಕಿಸಲು ಸಮರ್ಥರಾದರೆ ತಮ್ಮ ಜೀವನವು ಯಶಸ್ವಿಯೆಂದೂ ಇಲ್ಲದಿದ್ದರೆ ಇಲ್ಲವೆಂದೂ ತಿಳಿಯುವರು. ಅವರು ಜನರ ಕಣ್ಣಲ್ಲಿ ಶ್ರೇಷ್ಠರೂ ತತ್ತ್ವಜ್ಞಾನಿಗಳೂ ವಿಜ್ಞಾನಿಗಳೂ ರಾಜಕಾರಣ ತಜ್ಞರೂ ಆಗಿದ್ದು ಜಗತ್ ಪ್ರಖ್ಯಾತಿಯನ್ನೂ ಸಂಪತ್ತನ್ನೂ ಪಡೆದಿರಬಹುದು; ಆದರೂ ಅವರ ಜೀವನ ಸಮಸ್ಯೆಯು ಬಿಡಿಸಲ್ಪಡದೆ ಉಳಿಯಬಹುದು. ನಿಜವಾಗಿಯೂ ಅದು ಸಾವಿನೊಂದಿಗೆ ಮುಗಿದಂತಾಗುವುದಿಲ್ಲ; ಏಕೆಂದರೆ ಸಾವು ಕೇವಲ ಒಂದು ರೂಪಾಂತರ. ಮರಣಾನಂತರ ನಮ್ಮ ಮುಂದಿನ ಜೀವನವು— ಅದು ಯಾವುದಾದರೂ ಇರಲಿ— ಆರಂಭವಾಗುವುದು. ಈ ಜೀವನಕ್ಕಿಂತ ಮುಂಚೆ ಹೇಗೆ ನಾವು ಬೇರೆ ಬೇರೆ ರೂಪಗಳಲ್ಲಿ ಅನೇಕ ಜನ್ಮಗಳನ್ನು ಕಳೆದಿರುವೆವೋ ಹಾಗೆಯೆ ಮರಣಾನಂತರವೂ ಬೇರೆ ಹಲವಾರು ಜನ್ಮಗಳನ್ನು ಪಡೆಯಬಹುದು. ಜನನ–ಮರಣಗಳ ಚಕ್ರವು ಅನಿಶ್ಚಿತವಾಗಿ ಮುಂದುವರಿಯುತ್ತಲೇ ಇರುತ್ತದೆ. ವರ್ತಮಾನ ಜನ್ಮದ ಸಮಸ್ಯೆಗಷ್ಟೆ ಅಲ್ಲದೆ ಮುಂದಿನವುಗಳಿಗೂ ಪರಿಹಾರವನ್ನು ಕಂಡುಹಿಡಿಯುವುದೇ ನಮ್ಮ ಮುಂದಿರುವ ಪ್ರಶ್ನೆಯಾಗಿದೆ. ವಿಶಾಲಾರ್ಥದಲ್ಲಿ, ಈ ಸಮಸ್ಯೆಯು ಮಹಾಪ್ರಳಯದ ವರೆಗಿನ ಬೇರೆ ಬೇರೆ ಕಾಲಗಳಲ್ಲಿ, ಸ್ಥೂಲ–ಸೂಕ್ಷ್ಮದ ವಿವಿಧ

ರೂಪಗಳಲ್ಲಿ ಆತ್ಮದ ಎಲ್ಲ ಅಸ್ತಿತ್ವವನ್ನೂ ಒಳಗೊಳ್ಳುತ್ತದೆ. ಜನನ–ಮರಣಗಳ ಪ್ರಶ್ನೆಯನ್ನು ಕುರಿತು ಬೇರೆ ಬೇರೆ ಮತಾನುಯಾಯಿಗಳಲ್ಲಿ ಅಭಿಪ್ರಾಯ ಭೇದಗಳಿರಬಹುದು. ಆದರೆ ಶಾಸ್ತ್ರಗಳ ಕೇವಲ ತಾತ್ತ್ವಿಕ ಜ್ಞಾನವು ಈ ಪ್ರಶ್ನೆಯನ್ನು ಬಿಡಿಸಲಾರದೆಂಬುದು ನಿಶ್ಚಿತ. ಇದಕ್ಕಾಗಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರತ್ಯಕ್ಷ ಅನುಭವದ ಅಗತ್ಯವಿದೆ. ಸೂಕ್ಷ್ಮತಮ ಅನುಭವಶಕ್ತಿಯನ್ನು ಹೊಂದಿ ಆಮುಷ್ಮಿಕ ಜೀವನದ ನಿಜಸ್ಥಿತಿಯನ್ನು ತಾನು ಅನುಭವಿಸಿದರೆ ಈ ಪ್ರಶ್ನೆಯೆ ಮುಗಿದಂತಾಗುವುದು. ಇದರ ರಹಸ್ಯವು ಜನರಿಂದ ನಾನಾರೀತಿಗಳಲ್ಲಿ ತಿಳಿಸಲ್ಪಟ್ಟಿದೆಯಾದರೂ ಜೀವನದ ಉದ್ದೇಶವು ಮರಣಾನಂತರ ಶಾಶ್ವತವಾದ ಆನಂದವನ್ನು ಪಡೆಯುವುದೆಂಬ ಬಗ್ಗೆ ಮಾತ್ರ ಎಲ್ಲರ ಅಭಿಪ್ರಾಯವೂ ಒಂದೇ ಆಗಿದೆ. ಇದಕ್ಕಾಗಿ, ಸದಾಚಾರಸಂಪನ್ನವೂ ತ್ಯಾಗಮಯವೂ ಭಕ್ತಿಪರವೂ ಆದ ಜೀವನವು ಅಗತ್ಯವೆಂದೂ, ಇಂಥ ಜೀವನವು ಅವರಿಗೆ ಸ್ವರ್ಗದ ಶಾಶ್ವತ ಸುಖವನ್ನೋ ಮೋಕ್ಷವನ್ನೋ ತಂದು ಕೊಡುತ್ತದೆಂದೂ ಒತ್ತಿ ಹೇಳುವರು. ಆದರೆ ಇದು ಸಮಸ್ಯೆಯ ಪರಿಸಮಾಪ್ತಿಯಲ್ಲ. ಅದು ಇನ್ನೂ ಆಚೆಗೆ ಹೋಗುತ್ತದೆ. ಈ ಸಮಸ್ಯೆಯ ಪರಿಹಾರವನ್ನು ಹುಡುಕಲು ನಾವೀಗ ನಮ್ಮ ಅಸ್ತಿತ್ವದ ಆರಂಭಕಾಲದತ್ತ ನೋಡಬೇಕಾಗುವುದು. ಈಗಿನ ನಮ್ಮ ಸ್ಥೂಲತಮ ರೂಪದ ಅಸ್ತಿತ್ವವು ಆಕಸ್ಮಿಕವಾಗಲಿ, ಒಮ್ಮಿಂದೊಮ್ಮೆಯಾಗಲಿ ಉಂಟಾಗಿರದೆ ಅದು ಕ್ರಮವಿಕಾಸದ ಪರಿಣಾಮವಾಗಿದೆ. ಆತ್ಮದ ಅಸ್ತಿತ್ವವನ್ನು ಕಂಡುಹಿಡಿಯಲು, ಬಹಳ ಹಿಂದೆ, ಸೃಷ್ಟಿಯ ಆರಂಭಕಾಲದ ವರೆಗೂ ಹೋಗಬೇಕಾಗುವುದು. ಆಗ ಆತ್ಮವು ತನ್ನ ನೈಜಸ್ಥಿತಿಯಲ್ಲಿ ಪ್ರತ್ಯೇಕಸತ್ತೆಯಾಗಿದ್ದಿತು. ಆತ್ಮದ ಅಸ್ತಿತ್ವದ ಅತಿಸೂಕ್ಷ್ಮವಾದ ಆ ಮೂಲ ಸ್ಥಿತಿಯಿಂದ ನಾವು ಬರುಬರುತ್ತ ಸ್ಥೂಲರೂಪಗಳ ಕಡೆಗೆ ಹೊರಟೆವು. ಇವುಗಳನ್ನು ನಾವು ಆತ್ಮದ ಸುತ್ತಲಿನ ಆವರಣಗಳೆಂದು ಹೇಳಬಹುದು. ತೀರ ಪ್ರಾರಂಭದ ಆವರಣಗಳು ಬಹುಸೂಕ್ಷ್ಮರೂಪದುವಾಗಿದ್ದು ಅವುಗಳೊಂದಿಗೆ ನಾವು 'ಸ್ವದೇಶ'ದಲ್ಲಿ— ಭಗವಂತನ ರಾಜ್ಯದಲ್ಲಿ— ಇದ್ದೆವು. ಬರುಬರುತ್ತ ಅಹಂಕಾರದ ಈ ಆವರಣಗಳು ಹೆಚ್ಚುತ್ತ ಹೋಗಿ, ಮನಸ್ಸು, ಚಿತ್ತ, ಬುದ್ಧಿ ಮತ್ತು ಅಹಂಕಾರಗಳು ಸ್ಥೂಲತರ ರೂಪದಲ್ಲಿ ನಮ್ಮ ಜಡತೆಯನ್ನು ಹೆಚ್ಚಿಸುವುದರಲ್ಲಿ ಭಾಗಿಗಳಾದುವು.

ಕೆಲಕಾಲಾನಂತರ ಸಂಸ್ಕಾರಗಳುಂಟಾಗಲು ಆರಂಭವಾಗಿ ಅವು ತಮ್ಮ ಪರಿಣಾಮಗಳನ್ನೂ ಬೀರಹತ್ತಿದುವು. ಸದ್ಗುಣ ಮತ್ತು ದುರ್ಗುಣಗಳು ಕಾಣಿಸಿಕೊಂಡುವು. ನಮ್ಮ ಅಸ್ತಿತ್ವವು ಅತ್ಯಂತ ಸ್ಥೂಲರೂಪವನ್ನು ತಾಳುತ್ತ ನಡೆಯಿತು. ಸಂಸ್ಕಾರಗಳ ಪರಿಣಾಮವೆಂದರೆ ಸುಖ–ದುಃಖಾದಿಗಳ ಅನುಭವದ ಪ್ರಾರಂಭ. ಸುಖದ ಬಗ್ಗೆ ನಮ್ಮ ಅನುರಾಗವೂ ದುಃಖದ ಬಗ್ಗೆ ನಮ್ಮ ದ್ವೇಷವೂ ಇನ್ನಷ್ಟು ಹೆಚ್ಚಿನ ತೊಡಕುಗಳನ್ನುಂಟುಮಾಡಿವೆ. ನಾವು ಸಾಮಾನ್ಯವಾಗಿ ನೋವು–ದುಃಖಗಳಲ್ಲಿ ಸಿಲುಕಿ ಅವುಗಳಿಂದ ಮುಕ್ತರಾಗುವುದೇ ನಮ್ಮ ಮುಖ್ಯ ಗುರಿಯನ್ನಾಗಿಟ್ಟುಕೊಳ್ಳುವೆವು. ಇದು ಸಮಸ್ಯೆಯನ್ನು ತೀರ ಸಂಕುಚಿತ ದೃಷ್ಟಿಯಿಂದ ನೋಡಿದಂತೆ. ಐಹಿಕ ಫಲಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡ ಜೀವನದ ಗುರಿಯಾದರೂ ನಿರರ್ಥಕವಾದುದು. ಕಷ್ಟ–ಕಾರ್ಪಣ್ಯಗಳು ಒಂದು ವ್ಯಾಧಿಯ ಲಕ್ಷ್ಯಣಗಳಾಗಿದ್ದು ಆ ವ್ಯಾಧಿಯು ಎಲ್ಲೋ ಒಂದೆಡೆ ಇದೆಯೆಂಬುದನ್ನು ನಾವು ಮರೆಯುತ್ತೇವೆ. ಐಹಿಕ ಸುಖಗಳನ್ನು ಪಡೆಯುವುದಕ್ಕಾಗಿ ಭಗವದ್ಭಕ್ತಿಯನ್ನು ಮಾಡುವುದು ಅಪಹಾಸ್ಯದ ಸಂಗತಿ. ನೋವು–ದುಃಖಗಳಿಂದ ಪಾರಾಗುವುದಷ್ಟೆ ನಮ್ಮ ಮುಂದಿರುವ ಸಮಸ್ಯೆಯಾಗಿರದೆ ಅವುಗಳ ಅಂತಿಮ ಕಾರಣವಾಗಿರುವ ಬಂಧನದಿಂದ ಬಿಡುಗಡೆ ಹೊಂದುವುದೇ ದೊಡ್ಡ ಸಮಸ್ಯೆಯಾಗಿದೆ. ಬಂಧನದಿಂದ ಬಿಡುಗಡೆ ಹೊಂದುವುದೇ ಮುಕ್ತಿ. ಸ್ವರ್ಗತಿಯು (Salvation) ಶಾಶ್ವತ ಮುಕ್ತಿ (Liberation) ಗಿಂತ ಬೇರೆಯಾಗಿದ್ದು, ಅದು ಪುನರ್ಜನ್ಮದ ಗತಿಯ ಕೊನೆಯಲ್ಲ. ಮೋಕ್ಷವು ಈ ಚಕ್ರಗತಿಯಲ್ಲಿ ತಾತ್ಪೂರ್ತಿಕ ವಿರಾಮ ಮಾತ್ರ. ಅದು ಜನನ–ಮರಣಗಳ ಕ್ರಿಯೆಯನ್ನು ಕೆಲಕಾಲದ ವರೆಗೆ ಸ್ಥಗಿತಗೊಳಿಸುವುದು. ಅನಂತರ ಮತ್ತೆ ನಾವು ಭೌತಿಕ ಶರೀರವನ್ನು ಧರಿಸಬೇಕಾಗುವುದು. ನಾವು ಮುಕ್ತಿಯನ್ನು (Liberation) ಪಡೆದಾಗಲೇ ಅನಾದಿಯಾದ ಜನನ-ಮರಣದ ಚಕ್ರವು ಕೊನೆಗೊಳ್ಳುವುದು. ಆಗಲೇ ನಮ್ಮ ಎಲ್ಲ ದುಃಖಗಳಿಗೂ ಕೊನೆ. ಮುಕ್ತಿಯ ಆಚೆ ಕ್ರಮಿಸ ಬೇಕಾದ ಮಾರ್ಗವು ಬಹಳವಾಗಿದ್ದರೂ ಮುಕ್ತಿಗಿಂತ ಕಡಮೆಯಾದ ಯಾವುದನ್ನೂ ಜೀವನದ ಗುರಿಯನ್ನಾಗಿಟ್ಟುಕೊಳ್ಳಕೂಡದು. ಆಧ್ಯಾತ್ಮಸೋಪಾನದಲ್ಲಿ ತೀರ ಕೆಳಗಿನ ಮೆಟ್ಟಲಾದ ಮುಕ್ತಿಯನ್ನು ತಮ್ಮ ಜೀವನದ ಕೊನೆಯ ಗುರಿಯನ್ನಾಗಿ-

ಟ್ಟುಕೊಂಡ ಜನರು ಕೂಡ ತೀರ ವಿರಳ. ಈ ಮಟ್ಟಕ್ಕಿಂತ ನಾವು ಸ್ವಲ್ಪಾದರೂ ಕೆಳಗಿಳಿದರೆ ಸಮಸ್ಯೆಯು ಪೂರ್ತಿಯಾಗಿ ಬಿಡಿಸಲ್ಪಡದೆ ಹಾಗೆಯೆ ಉಳಿಯುತ್ತದೆ. ತಮಗೆ ಮುಕ್ತಿಯು ಬೇಕಾಗಿಲ್ಲವೆಂದು ಹೇಳುವ ಜನರೂ ಉಂಟು. ಅವರು ಮತ್ತೆ ಮತ್ತೆ ಈ ಪ್ರಪಂಚದಲ್ಲಿ ಬರಲು ಬಯಸಿ ಭಕ್ತಿಸಾಧನೆಯನ್ನು ಮಾಡಲಪೇಕ್ಷಿಸುತ್ತಾರೆ. ಅವರ ಜೀವನದ ಗುರಿಯು ಅಸ್ಪಷ್ಟವಾಗಿಯೂ ಅನಿಶ್ಚಿತವಾಗಿಯೂ ಇರುತ್ತದೆ. ಅವರು ಹೇಳುವಂತೆ, ಭಕ್ತಿಯೆ ಅವರ ಗುರಿ, ಮತ್ತೇನೂ ಅಲ್ಲ. ನಿಜವಾಗಿಯೂ ಅವರು ಭಕ್ತನ ಮನೋಹರವಾದ ಸ್ಥಿತಿಯಿಂದ ಆಕೃಷ್ಟರಾಗಿದ್ದು ಕೊನೆಯವರೆಗೂ ಅದರಲ್ಲಿಯೆ ಸಿಲುಕಿ ಬೀಳಲು ಇಚ್ಛಿಸುತ್ತಾರೆ. ತಮ್ಮನ್ನು ತಾವು ಸಂತೋಷಪಡಿಸಿಕೊಳ್ಳಲು ಅವರು ಭಕ್ತಿಯನ್ನು ಮಾಡುತ್ತಾರೆ. ನಾವು ಎಲ್ಲಿಯವರೆಗೆ ಯಾವುದಾದರೊಂದು ಬಲೆಯಲ್ಲಿ ಸಿಕ್ಕಿಬಿದ್ದಿರುವೆವೋ ಅಲ್ಲಿಯವರೆಗೆ ಶಾಶ್ವತಬಂಧನದಿಂದ ಬಿಡುಗಡೆಹೊಂದುವುದು ಸಾಧ್ಯವಿಲ್ಲ. ಬಂಧನದಿಂದ ಮುಕ್ತವಾಗುವುದೇ ಆತ್ಮದ ಸಹಜ ಹಂಬಲ. ಪಾಶಗಳಿಂದ ಪಾರಾಗಲು ಇಷ್ಟಪಡದವರಿಗೆ ಸಮಸ್ಯೆಯ ಪರಿಹಾರವೇ ಇಲ್ಲ. ಭಕ್ತಿಯು ಗುರಿಯನ್ನು ಮುಟ್ಟಲು ಒಂದು ಸಾಧನವೇ ಹೊರತು ತಾನೇ ಗುರಿಯಲ್ಲ. ನಾನು ಮೇಲೆ ವಿವರಿಸಿದಂತೆ ಅವರು (ಭಕ್ತರು) ಆರಂಭದಶೆಯ ಪರಿಣಾಮದಿಂದ ಆಕೃಷ್ಟರಾಗಿ ಅದರಿಂದ ಎಂದಿಗೂ ಪಾರಾಗಲು ಬಯಸುವುದಿಲ್ಲ. ಅವರು ಇಟ್ಟುಕೊಂಡ ಈ ಸಂಕುಚಿತ ದೃಷ್ಟಿಯು ಅವರನ್ನು ವಿಶಾಲದೃಷ್ಟಿಯಿಂದ ವಂಚಿತರನ್ನಾಗಿ ಮಾಡುವುದು. ಆಚೆಯ ಯಾವುದೇ ಸಂಗತಿಯು ಅವರಿಗೆ ಗೋಚರವಾಗುವುದಿಲ್ಲ. ಮೇಲಿನ ಮಾತನ್ನು ಸಮರ್ಥಿಸಲು ಹೂಡಲಾಗುವ ಇನ್ನೊಂದು ಆಭಾಸಾತ್ಮಕ ವಾದವೆಂದರೆ, 'ಒಂದು ನಿರ್ದಿಷ್ಟ ಗುರಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಲಾಗುವ ಭಕ್ತಿಯು ನಿಷ್ಕಾಮವಲ್ಲ' ಎಂಬುದು. ಗೀತೆಯಲ್ಲಿ ಹೇಳಲಾದ ನಿಷ್ಕಾಮ ಉಪಾಸನೆಯ ಸಿದ್ಧಾಂತವು ಯಾವ ನಿರ್ದಿಷ್ಟ ಗುರಿಯನ್ನೂ ಇಟ್ಟುಕೊಳ್ಳದೆ ನಾವು ಭಕ್ತಿಯನ್ನಾಚರಿಸಬೇಕೆಂಬುದನ್ನು ದೃಢಪಡಿಸುವುದಾದರೂ ಅದರ ನಿಜಾರ್ಥವು 'ಐಹಿಕ ಫಲಗಳನ್ನು ದೃಷ್ಟಿಯಲ್ಲಿಟ್ಟುಕೊಳ್ಳದೆ ಅಥವಾ ನಮ್ಮ ಕಾಮನೆಗಳ ತೃಪ್ತಿಯಕಡೆಗೆ ಲಕ್ಷ್ಯಕೊಡದೆ ಭಕ್ತಿಯನ್ನು ಮಾಡಬೇಕು' ಎಂದಾಗುವುದು. ಪಥಿಕರಿಗೆ ಅತ್ಯಗತ್ಯವಾದ ಜೀವನದ ಗುರಿ-

ಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದರಲ್ಲಿ ಅದು ನಮಗೆ ಅಡ್ಡಿಯಾಗುವುದಿಲ್ಲ. ನಾವು ಕಟ್ಟಕಡೆಗೆ ಯಾವುದನ್ನು ಸೇರಬೇಕಾಗಿದೆಯೋ ಆ ಸ್ಥಾನವೇ ಜೀವನದ ಗುರಿಯಲ್ಲದೆ ಬೇರಾವುದೂ ಅಲ್ಲ. ಬೇರೆ ಶಬ್ದಗಳಲ್ಲಿ ಹೇಳಬೇಕಾದರೆ, ಅದು ನಾವು ಕೊನೆಗೆ ಮರಳಬೇಕಾದ 'ಸ್ವದೇಶ'ದ ಸ್ಮರಣೆ ಅಥವಾ ಇಂದಿನ ಸ್ಥೂಲ ಅಸ್ತಿತ್ವದ ಮೂಲಸ್ಥಿತಿ. ನಮ್ಮ ಮನಸ್ಸಿನಲ್ಲಿ ನಾವು ಗಂತವ್ಯದ ಕಲ್ಪನೆಯನ್ನು ಜಾಗೃತವಾಗಿಟ್ಟುಕೊಂಡು ಅದಕ್ಕಾಗಿ ಕರ್ತವ್ಯವೆಂದು ಮಾತ್ರ ತಿಳಿದು ಭಕ್ತಿಯನ್ನಾಚರಿಸುವೆವು. 'ಕರ್ತವ್ಯಕ್ಕಾಗಿ ಕರ್ತವ್ಯ'ವು ನಿಸ್ಸಂದೇಹವಾಗಿ ನಿಷ್ಕಾಮಕರ್ಮವಾಗಿದೆ; ಹಾಗು ನಮ್ಮ ಜೀವನದ ಗುರಿಯನ್ನು ಸಾಧಿಸುವುದು ನಮ್ಮ ಅತ್ಯಾವಶ್ಯಕ ಕರ್ತವ್ಯವಾಗಿದೆ.

ಈಗ, ಜೀವನದ ನಿಜವಾದ ಗುರಿಯೇನಿರಬೇಕೆಂಬ ಮಾತಿಗೆ ಬರುವೆನು. ಗುರಿಯು ಅತ್ಯುನ್ನತವಾಗಿರಬೇಕೆಂದೂ ಇಲ್ಲದಿದ್ದರೆ ಕೊನೆಯವರೆಗೆ ಪ್ರಗತಿಯು ಸಂಶಯಾಸ್ಪದವೆಂದೂ ಸಾಮಾನ್ಯವಾಗಿ ಒಪ್ಪಲಾಗಿದೆ. ಇದಕ್ಕಾಗಿ, ಮನುಷ್ಯನಿಗೆ ಸಾಧ್ಯವಾಗುವ ಪ್ರಗತಿಯ ಪರಾಕಾಷ್ಠೆಯ ಸ್ಪಷ್ಟವಾದ ಕಲ್ಪನೆಯಿರುವುದು ಆವಶ್ಯಕವಾಗಿದೆ. ನಾವು ನಮ್ಮೆದುರಿಗೆ ಎರಡು ದಿವ್ಯಾವತಾರಗಳಾದ ರಾಮ ಹಾಗು ಕೃಷ್ಣರ ಉದಾಹರಣೆಗಳನ್ನು ಇಟ್ಟುಕೊಂಡಿದ್ದೇವೆ. ಅವರನ್ನು ನಾವು ಶ್ರದ್ಧಾಭಕ್ತಿಗಳಿಂದ ಪೂಜಿಸಿ ಅವರೊಂದಿಗೆ ಐಕ್ಯವನ್ನು ಹೊಂದಬಯಸುತ್ತೇವೆ. ಸ್ವಾಭಾವಿಕವಾಗಿ ಅದೇ ನಮ್ಮ ಜೀವನದ ಗುರಿಯಾಗುವುದು; ಮತ್ತು ಬಹಳವೆಂದರೆ ನಾವು ಅವರ ಮಟ್ಟವನ್ನು ಮುಟ್ಟಬಹುದು. ಈಗ ಅವತಾರಗಳೆನ್ನಿಸಿಕೊಳ್ಳುವ ರಾಮ–ಕೃಷ್ಣರು ವಿಭೂತಿವಿಶೇಷಗಳಾಗಿದ್ದು ನಿಸರ್ಗದ ಅಗತ್ಯಕ್ಕನುಸಾರವಾಗಿ ಯಾವ ಕಾರ್ಯವನ್ನು ಪೂರ್ತಿಗೊಳಿಸಲು ಅವರು ಬಂದಿದ್ದರೋ ಅದರ ಸಿದ್ಧಿಗಾಗಿ ಅಲೌಕಿಕ ಶಕ್ತಿಗಳನ್ನು ಪಡೆದವರಾಗಿದ್ದರು. ನಿಸರ್ಗದ ವಿವಿಧ ಶಕ್ತಿಗಳ ಮೇಲೆ ಅವರಿಗೆ ಸಂಪೂರ್ಣ ಪ್ರಭುತ್ವವಿದ್ದಿತಲ್ಲದೆ ತಮಗೆ ಯೋಗ್ಯ ತೋರಿದಂತೆ ಬೇಕಾದಾಗ ಅವುಗಳನ್ನುಪಯೋಗಿಸಲು ಸಮರ್ಥರಾಗಿದ್ದರು. ಅವರು ಸಾಧಿಸಬೇಕಾದ ಕಾರ್ಯದ ಸ್ವಭಾವಕ್ಕನುಗುಣವಾಗಿ ಅವರ ಚಟುವಟಿಕೆಯು ಸೀಮಿತವಾಗಿದ್ದಿತು. ಸೂಕ್ಷ್ಮರೂಪದ, ಅಂತೆಯೆ ಅತ್ಯಂತ ಸತ್ತ್ವಶಾಲಿಯಾದ ದೈವೀಶಕ್ತಿಯ ಸ್ವರೂಪವಾದ ಮಹಾಮಾಯೆಯು ವಲಯ

ದಿಂದ ಅವರು ಅವತರಿಸಿದರು. ಈ ಕಾರಣದಿಂದಲೇ ಅವರ ಜೀವನಕಾಲ ದಲ್ಲಿ ಅತ್ಯುತ್ತಮ ಪರಿಣಾಮಗಳು ಫಲಿಸಿರುವುದನ್ನು ನಾವು ಕಾಣುವೆವು. ಮನುಷ್ಯನು ಮುಟ್ಟಲು ಸಾಧ್ಯವಿದ್ದ ಪರಾಕಾಷ್ಠೆಯ ಗುರಿಯು ಮಹಾ- ಮಾಯಾಕ್ಷೇತ್ರದಿಂದ ಬಹಳ ಆಚೆಗಿದೆ; ಆದುದರಿಂದ ಆ ಮಟ್ಟಕ್ಕಿಂತ ಬಹಳ ಎತ್ತರಕ್ಕೆ ಹೋಗಬೇಕು. ಓದುಗರನೇಕರಿಗೆ ಇದು ಆಶ್ಚರ್ಯವೆಂದು ತೋರ ಬಹುದಾದರೂ ಈ ಸಂಗತಿಯಲ್ಲಿ ತಿಲಮಾತ್ರವೂ ಸಂಶಯವಿಲ್ಲ. ಎಲ್ಲಿ ಎಲ್ಲ ತರದ ಶಕ್ತಿ–ಸಾಮರ್ಥ್ಯಗಳಾಗಲಿ, ಚಟುವಟಿಕೆ-ಪ್ರಚೋದನಗಳಾಗಲಿ ಇಲ್ಲ- ದಂತಾಗಿ ಮನುಷ್ಯನು ಪೂರ್ಣ ಅಭಾವದ, ನಾಸ್ತಿತ್ವದ ಅಥವಾ ಶೂನ್ಯದ ಸ್ಥಿತಿಯಲ್ಲಿ ಪ್ರವೇಶಿಸುವನೋ ಅದೇ ನಾವು ಸೇರತಕ್ಕ ಕೊನೆಯಬಿಂದು ವಾಗಿದೆ. ಅದು ನಮ್ಮ ಮಾರ್ಗದ ಅತ್ಯುನ್ನತ ನೆಲೆ ಅಥವಾ ಜೀವನದ ಚರಮ ಗುರಿ. ನಾನಿದನ್ನು ರೇಖಾಚಿತ್ರದ ಮೂಲಕ ತಿಳಿಸಲು ಯತ್ನಿಸಿ ದ್ದೇನೆ. 'ಕ' ಕೇಂದ್ರದ ಸುತ್ತಲೂ ಎಳೆದ ಏಕಕೇಂದ್ರಕ ವೃತ್ತಗಳು ನಮ್ಮ ಪ್ರಗತಿಮಾರ್ಗದಲ್ಲಿ ಬರುವ ವಿವಿಧ ಆಧ್ಯಾತ್ಮಿಕ ವಲಯಗಳನ್ನು ಸ್ಥೂಲವಾಗಿ ಸೂಚಿಸುತ್ತವೆ. ನಾವು ತೀರ ಹೊರಗಿನ ವೃತ್ತದಿಂದ ಹೊರಟು ಮುಂದಿನ ಸ್ಥಿತಿಯನ್ನು ಹೊಂದಲು ಒಂದೊಂದೇ ವೃತ್ತವನ್ನು ದಾಟುತ್ತ ಕೇಂದ್ರದ ಕಡೆಗೆ ಸಾಗುವೆವು. ಅದು ಬಹು ವಿಶಾಲವಾದ ಕ್ಷೇತ್ರ. ನಾನು ಮುಕ್ತಿ ಯನ್ನು ಕುರಿತು ಹೇಳಿದರೆ, ಜನರು ಅದನ್ನು ಬಹುದೂರದ ವಸ್ತುವೆಂದೂ ಅನೇಕ ಜನ್ಮಗಳಲ್ಲಿಯ ಸತತ ಪ್ರಯತ್ನದಿಂದ ದೊರಕಿಸಲು ಸಾಧ್ಯವೆಂದೂ ತಿಳಿಯುವರು. ಈ ಚಿತ್ರದಲ್ಲಿ ಮುಕ್ತಿಯ ಸ್ಥಿತಿಯು ಎರಡನೆಯ ಮತ್ತು ಮೂರನೆಯ ವೃತ್ತಗಳ ನಡುವಿದೆ. ಮುಕ್ತಿಯನ್ನು ಪಡೆಯಲು ನಾವು ಯಾವ ಯಾವ ವಿವಿಧ ಸ್ಥಿತಿಗಳನ್ನು ದಾಟಿಹೋಗಬೇಕಾಗುವುದೋ ಅವೆ- ಲ್ಲವೂ ಸುಮಾರು ಒಂದೂವರೆ ವೃತ್ತದಲ್ಲಿಯೆ ಬಂದು ಬಿಡುವುವು. ಸಾಮಾ- ನ್ಯವಾಗಿ ನಿಜವಾಗಿಯೂ ಕಠಿಣವೆಂದು ಬಗೆಯಲಾದ ಮುಕ್ತಿಯ ಸ್ಥಾನವನ್ನು ಸೇರಿದ ಅನಂತರವೂ ಏನು ಪಡೆಯುವುದುಳಿಯುತ್ತದೆಂಬ ಬಗ್ಗೆ ಓದುಗರು ಸಾಮಾನ್ಯ ಕಲ್ಪನೆಯೊಂದನ್ನು ಮಾಡಿಕೊಳ್ಳಲು ಇದರಿಂದ ಸಹಾಯವಾಗು ವುದು. ಈ ಸ್ಥಿತಿಯನ್ನು ಪಡೆದಮೇಲೆ ಐದನೆಯ ವೃತ್ತವನ್ನು ದಾಟುವ ವರೆಗೆ ಉಳಿದ ವೃತ್ತಗಳನ್ನು ದಾಟುತ್ತ ಹೋಗುವೆವು. ಇದು 'ಅವ್ಯಕ್ತಗತಿ'ಯು.


ಕೇಂದ್ರ
ಕೇಂದ್ರಮಂಡಲ
(ಏಳು ಜ್ಯೋತಿರ್ಮಯ ವೃತ್ತಗಳು)
ಅಹಂಕಾರದ ಸ್ಥಿತಿಗಳು
(ಹನ್ನೊಂದು ವೃತ್ತಗಳು)
ಮಾಯೆಯ ಸ್ಥಿತಿಗಳು
(ಐದು ವೃತ್ತಗಳು)

ಮುಕ್ತಿ ಮಾರ್ಗದೆಡೆಗೆ—

ಮಜಲು. ಈ ಮಜಲಿನಲ್ಲಿ ಮನುಷ್ಯನು ಮಾಯೆಯ ಬಂಧನಗಳಿಂದ ಪೂರ್ಣ ಮುಕ್ತನಾಗಿರುವನು. ಪೂರ್ವಕಾಲದ ಋಷಿಗಳಲ್ಲಿ ಬಹಳ ಕಡಮೆ ಜನರು ಈ ಸ್ಥಿತಿಯನ್ನು ಮುಟ್ಟಬಲ್ಲವರಾಗಿದ್ದರು. ಅವರಲ್ಲಿ ಜನಕರಾಜನೊಬ್ಬನು ಈ ಅವಸ್ಥೆಯನ್ನು ಹೊಂದಲು ಶಕ್ತನಾಗಿದ್ದನು. ಆತನ ಸ್ಥಿತಿಯು ಎಷ್ಟು ಉಚ್ಚವೆಂದು ಗಣಿಸಲಾಗುತ್ತಿದ್ದಿತೆಂದರೆ ಆ ಕಾಲದ ಪ್ರಸಿದ್ಧ ಋಷಿಗಳು ಕೂಡ ತಮ್ಮ ಮಕ್ಕಳನ್ನೂ ಶಿಷ್ಯರನ್ನೂ ಆತನಲ್ಲಿಗೆ ( ಆಧ್ಯಾತ್ಮಿಕ ) ತರಬೇತಿಗಾಗಿ ಕಳಿಸುತ್ತಿದ್ದರು. ನನ್ನ 'Efficacy of Rajayoga' ಗ್ರಂಥದಲ್ಲಿ ವಿವರಿಸಲಾದ 'ಹೃದಯ ಮಂಡಲ'ವನ್ನು ನಾವೀಗ ದಾಟಿ ಐದನೆಯ ವೃತ್ತದ ಆಚೆಗಿರುವ 'ಮನೋಮಂಡಲ'ವನ್ನು ಪ್ರವೇಶಿಸುವೆವು. ಇದರ ಮುಂದಿನ ಹನ್ನೊಂದು ವೃತ್ತಗಳು ಅಹಂಕಾರದ ಬೇರೆ ಬೇರೆ ಸ್ಥಿತಿಗಳನ್ನು ಸೂಚಿಸುವುವು. ಅಲ್ಲಿಯ ಸ್ಥಿತಿಯು ಬಲು ಸೂಕ್ಷ್ಮವಾಗಿದ್ದು ಈ ಮಂಡಲದೊಳಗೆ ಮುಂದುವರಿದಂತೆ ಸೂಕ್ಷ್ಮತರವಾಗುತ್ತ ಹೋಗುವುದು. ನಾವು ಹದಿನಾರನೆಯ ವೃತ್ತವನ್ನು ಮುಟ್ಟುವ ವೇಳೆಗೆ ಅಹಂಕಾರದಿಂದ ಬಿಡುಗಡೆ ಹೊಂದಿದಂತೆಯೆ. ಈ ಮಟ್ಟದಲ್ಲಿಯ ಸ್ಥಿತಿಯು ಅಚಿಂತ್ಯವಾದುದೆಂದು ಹೇಳಬಹುದಲ್ಲದೆ ಇದನ್ನು ಅತ್ಯಂತ ಮಹಿಮಾಸಂಪನ್ನರಾದ ಋಷಿಗಳೂ ಕ್ವಚಿತ್ತಾಗಿಯೇ ಪಡೆದಿದ್ದಾರೆ. ನನ್ನ ದರ್ಶನದ ಮಟ್ಟಿಗೆ ಹೇಳಬೇಕಾದರೆ, ಈ ಅವಸ್ಥೆಯನ್ನು ಹೊಂದಿರಬಲ್ಲವರಲ್ಲಿ (ಅರ್ಥಾತ್ ಹದಿನಾರನೆಯ ವೃತ್ತದವರೆಗೆ ಬಂದವರಲ್ಲಿ) ಕಬೀರನನ್ನುಳಿದು ಯಾವ ಪ್ರಾಚೀನ ಮಹರ್ಷಿಯೂ ಇಲ್ಲ. ಈ ವೃತ್ತವನ್ನು ದಾಟಿದ ಮೇಲೆ ಉಳಿಯುವುದೆಂದರೆ ಇನ್ನೂ ಸ್ಥೂಲರೂಪದಲ್ಲಿರುವ ಸಾರೂಪ್ಯ ಮಾತ್ರ. ಈಗ ನಾವು 'ಕೇಂದ್ರ ಮಂಡಲ'ವನ್ನು ಪ್ರವೇಶಿಸುತ್ತೇವೆ. ಅಲ್ಲಿಯೂ ನೀವು ಯಾವುದರದೋ ಏಳು ವೃತ್ತಗಳನ್ನು ಕಾಣುವಿರಿ; ನಿರ್ದೇಶಕ್ಕಾಗಿ ನಾನದನ್ನು ಪ್ರಕಾಶವೆಂದು ಕರೆಯಬಹುದು. ನಮ್ಮ ಮಾರ್ಗಕ್ರಮಣದಲ್ಲಿ ಅವುಗಳನ್ನೂ ದಾಟುವೆವು. ನಾನು ಹೇಳಿದ ಸ್ಥೂಲ ಸಾರೂಪ್ಯವು ಸಾಧ್ಯವಾದ ಮೇರೆಯ ವರೆಗೂ ಸೂಕ್ಷ್ಮವಾಗುತ್ತ ನಡೆಯುವುದು. ಈಗ ನಾವು ಕೇಂದ್ರಕ್ಕೆ ಅತಿಸಮೀಪವರ್ತಿಯಾದ ಸ್ಥಾನವನ್ನು ಸೇರುವೆವು. ಇದೇ ಮಾನವನು ಮುಟ್ಟಬಲ್ಲ ಪರಾಕಾಷ್ಠೆಯ ನೆಲೆ. ಅಲ್ಲಿ ನಾವು ತೀರ ನೈಜ ಸ್ಥಿತಿಯೊಂದಿಗೆ ಸಮರಸವಾಗಿ-

ರುವೆವು. ಜೀವೇಶ್ವರರಲ್ಲಿ ನಾಮಮಾತ್ರವಾದ ಭೇದವನ್ನುಳಿಸುವುದಕ್ಕಾಗಿ ಕೇಂದ್ರದಲ್ಲಿ ಪೂರ್ಣ ಐಕ್ಯವು ಶಕ್ಯವಾಗದು. ಇಷ್ಟಿದೆ ಮಾನವೀಯ ಸಿದ್ಧಿಯ ಔನ್ನತ್ಯ. ಸಾಕ್ಷಾತ್ಕಾರದ ಮಾರ್ಗದಲ್ಲಿ ಅತ್ಯುಚ್ಚ ಪ್ರಗತಿಯನ್ನು ಸಾಧಿಸ ಬಯಸುವ ಪ್ರತಿಯೊಬ್ಬ ಮನುಷ್ಯನೂ ಪ್ರಾರಂಭದಿಂದಲೇ ಇದನ್ನು ದೃಷ್ಟಿ-ಯಲ್ಲಿಟ್ಟುಕೊಳ್ಳಬೇಕು. ಪ್ರಪಂಚದ ಯೋಗಿಗಳಲ್ಲಾಗಲಿ ಸಂತರಲ್ಲಾಗಲಿ ಬಹಳ ಕಡಮೆ ಜನರಿಗೆ ಇದರ ಕಲ್ಪನೆಯಿದ್ದಿತು. ಅನೇಕ ಸಂಗತಿಗಳಲ್ಲಿ, ಅವರ ಚರಮ ಸಿದ್ಧಿಯೆಂದರೆ ಎರಡನೆಯ ಅಥವಾ ಮೂರನೆಯ ವೃತ್ತವನ್ನು ದಾಟುವುದು. ಈ ಪ್ರಾರಂಭಿಕ ಮಟ್ಟದಲ್ಲಿಯೂ ಅವರು ತಮ್ಮ ಸಿದ್ಧಿಯನ್ನು ಅತ್ಯುನ್ನತವೆಂದು ತಿಳಿಯುವುದು ದುರ್ದೈವದ ಸಂಗತಿಯೇ ಸರಿ. ಪೂರ್ಣತ್ವವನ್ನು ಹೊಂದಿರುವರೆಂದು ಹೇಳಲಾದ ಬ್ರಹ್ಮಜ್ಞಾನಿಗಳೆನ್ನಿಸಿಕೊಳ್ಳು-ವವರನ್ನು ಜನರು ಪರೀಕ್ಷಿಸಲು ಸಾಧ್ಯವಾಗಲೆಂಬ ದೃಷ್ಟಿಯಿಂದ ಇದೆಲ್ಲ ವನ್ನೂ ಹೇಳಿದ್ದೇನೆ. ಅಜ್ಞಜನತೆಯು ಸಾಮಾನ್ಯವಾಗಿ ಇಂಥವರ ಯೋಗ್ಯತೆಯನ್ನು ಬಾಹ್ಯಸ್ವರೂಪದ ಮೇಲಿಂದಲೋ ಭವ್ಯತೆಯ ಮೇಲಿಂ-ದಲೋ ಅಳೆದುನೋಡಿ ಅವರು ಪರಿಪೂರ್ಣರೆಂದು ಒಪ್ಪಿಕೊಳ್ಳುವುದು.

---

## ಅಧ್ಯಾಯ: ೩

# ಮಾರ್ಗಗಳು ಮತ್ತು ಸಾಧನಗಳು

ನಮ್ಮ ಗುರಿಯನ್ನು ನಿರ್ಧರಿಸಿದ ಮೇಲೆ ಅದನ್ನು ಹೊಂದಲು ಸಾಧನಗಳನ್ನು ಹುಡುಕುವುದು ಮುಂದಿನ ಸಮಸ್ಯೆಯಾಗಿದೆ. ಋಷಿಗಳೂ ಆಚಾರ್ಯರೂ ಈ ವಿಷಯವನ್ನು ಕುರಿತು ಸಾಕಷ್ಟು ವಿವರವಾಗಿ ಪ್ರತಿಪಾದಿಸಿದ್ದಾರೆ. ಅವರು ಯಾವುದನ್ನು ಅಂತಿಮ ಗುರಿಯೆಂದು ತೋರಿದ್ದಾರೋ ಅದನ್ನು ಪಡೆಯಲು ಸಹಾಯಕವಾಗುವ ವಿವಿಧ ಸಾಧನಗಳನ್ನು ಯೋಜಿಸಿದ್ದಾರೆ. ಆದರೆ ನಿರ್ಗುಣಬ್ರಹ್ಮ ಅಥವಾ ಪರಬ್ರಹ್ಮದ ಸಾಕ್ಷಾತ್ಕಾರಕ್ಕಾಗಿ ನಾವು ಅನುಸರಿಸುವ ಸಾಧನಗಳು ನಮ್ಮನ್ನು ಪೂರ್ಣ ನಿರಸನದ ಕಡೆಗೆ ಒಯ್ಯುವಂತಿರಬೇಕು. ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾದಂತೆ, ಯಾವುದು ಸಕಲ ವ್ಯಕ್ತಸೃಷ್ಟಿಯ ಮೂಲಕಾರಣವಾಗಿದೆಯೋ, ಮಹಾಪ್ರಳಯದ ಅನಂತರ ಎಲ್ಲವೂ ಕೊನೆಗೆ ಯಾವುದರಲ್ಲಿ ಲೀನವಾಗುವುದೋ ಆ ಕ್ರಿಯಾತೀತ ಕೇಂದ್ರಕ್ಕೆ ಅಥವಾ ಮೂಲಕ್ಕೆ ತೀರ ಸಮೀಪವರ್ತಿಯಾಗಿರುವ ನಮ್ಮ ಕೊನೆಯ ಸ್ಥಿತಿಯೇ ನಮ್ಮ ಜೀವನದ ಚರಮ ಗುರಿಯಾಗಿದೆ. ಈ ಸ್ಥಿತಿಯನ್ನು ಹೊಂದಲು ನಾವು ಸ್ವಯಂ ಶೂನ್ಯರಾಗಬೇಕಾಗುವುದು. ಆ ಸ್ಥಿತಿಯನ್ನು ಮಹಾಪ್ರಳಯದ ಕಾಲದಲ್ಲಿ ನಾವು ಸಹಜಗತಿಯಲ್ಲಿ ಮುಟ್ಟುವೆವೆಂಬುದು ನಿಸ್ಸಂದೇಹವಾದರೂ ಅಸಂಖ್ಯಾತ ಜನ್ಮಗಳ ದುಃಖಗಳಿಂದ ಪಾರಾಗಲು ಅದನ್ನು ಆದಷ್ಟು ತೀವ್ರ ಪಡೆಯಲು ಯತ್ನಿಸುವೆವು. ಎಲ್ಲವೂ ಮೂಲಕ್ಕೆ ತಿರುಗಿ ಬರಲು ಮಹಾಪ್ರಳಯ ಅಥವಾ ಪೂರ್ಣಲಯವು ಹೇಗೆ ಆವಶ್ಯಕವೋ ಹಾಗೆಯೆ ಆ ನೆಲೆಯನ್ನು ತಲುಪಲು ನಾವೇ ನಿರ್ಮಿಸಿಕೊಂಡ ಎಲ್ಲ ಪದಾರ್ಥಗಳ ಆತ್ಯಂತಿಕ ನಾಶವನ್ನು ಅಥವಾ ಪ್ರಳಯವನ್ನು ನಾವು ತಂದುಕೊಳ್ಳಬೇಕಾಗುವುದು. ಅರ್ಥಾತ್ ನಮ್ಮ ಎಲ್ಲ 'ಆಸ್ತಿ'ಯಿಂದ ( ಸಂಗ್ರಹಿಸಿದ ವಸ್ತುಗಳಿಂದ ) ನಾವು ಬಿಡುಗಡೆ ಹೊಂದಿ ಸೃಷ್ಟಿಯ ಆದಿಯಲ್ಲಿ ಯಾವ ಸರಳರೂಪದಲ್ಲಿದ್ದೆವೋ ಅದನ್ನೇ ಧಾರಣಮಾಡಬೇಕಾಗುವುದು.

ನಮ್ಮ ಜೀವಾತ್ಮದ ಸುತ್ತಲೂ ಆವರಿಸಿರುವ, ನಮ್ಮ ಆಚಾರ-ವಿಚಾರಗಳ ಫಲರೂಪವಾದ ಅನೇಕ ತೊಡಕು-ಆವರಣಗಳ ಪರಿಣಾಮಜನಕವಾದ ಸಂಸ್ಕಾರಗಳ ರಾಶಿಯೆ ನಮ್ಮ 'ಆಸ್ತಿ'. ಕ್ರಿಯಾತ್ಮಕವಾದ ಮಾನಸಿಕ ಹಾಗು ಬೌದ್ಧಿಕ ಶಕ್ತಿಗಳು ನಮ್ಮಲ್ಲಿವೆ. ನಮ್ಮ ಮನಸ್ಸು ನಮ್ಮ ಶಾರೀರಿಕ ಕ್ರಿಯೆಗಳನ್ನು ನಿರ್ಧರಿಸುತ್ತದೆ. ನಾವು ವಿಷಯಗಳನ್ನು ನೋಡುತ್ತೇವೆ, ಕೇಳುತ್ತೇವೆ, ಅನುಭವಿಸುತ್ತೇವೆ ಮತ್ತು ಗ್ರಹಣಮಾಡುತ್ತೇವೆ. ಅವು-ಗಳನ್ನು ಮೆಚ್ಚಲು ಇಲ್ಲವೆ ತಿರಸ್ಕರಿಸಲು ಆರಂಭಿಸುತ್ತೇವೆ: ಮೆಲ್ಲನೆ ಇಚ್ಛೆಗಳು ನುಸುಳಿ ಬಂದು ನಮ್ಮ ಕಾರ್ಯಗಳ ಮೇಲೆ ಪರಿಣಾಮ ಬೀರಲಾರಂಭಿ-ಸುವುವು. ಹೀಗೆ ವೃತ್ತಗಳು ಅಧಿಕವಾಗುತ್ತ ಹೋಗಿ ನಾವು ನಮ್ಮ ಇಚ್ಛೆಗಳ ತೃಪ್ತಿಗಾಗಿ ಪ್ರಯಾಸಪಡುವೆವು. ಒಂದು ಬಯಕೆಯು ಈಡೇರುತ್ತಲೇ ಅದು ಸಾಮಾನ್ಯವಾಗಿ ತನ್ನ ಸ್ಥಳದಲ್ಲಿ ಇನ್ನೊಂದನ್ನು ಹುಟ್ಟಿಸುವುದು. ಒಂದು ಕ್ಷಣಕಾಲವಾದರೂ ನಾವು ಕ್ವಚಿತ್ತಾಗಿಯೆ ನಿರೀಹರಾಗಿರುತ್ತೇವೆ. ಅಧಿ-ಕಾಂಶ ವಸ್ತುಗಳನ್ನು ನಾವು, ಅವುಗಳನ್ನು ಪಡೆಯಬೇಕೆಂಬ ವಿಚಾರದಿಂದಲೇ ನೋಡುವೆವು. ಈ ಅಪೇಕ್ಷೆಗಳು ನಮ್ಮ ದೈಹಿಕ ಮತ್ತು ಮಾನ-ಸಿಕ ಕ್ರಿಯೆಗಳನ್ನು ರೂಪಿಸುವುವಲ್ಲದೆ ಆತ್ಮದ ಸುತ್ತಲೂ ಹೆಚ್ಚು ಹೆಚ್ಚು ಆವರಣಗಳನ್ನು ಹಾಕುತ್ತ ಸಂಸ್ಕಾರಗಳನ್ನುಂಟುಮಾಡುವುವು. ಪ್ರತಿ ಕ್ಷಣದ ನಮ್ಮ ಹೊಸ ಬಯಕೆಗಳೂ ಅವುಗಳನ್ನು ತೃಪ್ತಿಗೊಳಿಸಲು ನಾವು ಮಾಡುವ ಪ್ರಯತ್ನಗಳೂ ಸತತವಾಗಿ ಹೆಚ್ಚುತ್ತಲೇ ಹೋಗುವುವು. ಭೋಗದ ಮೂಲಕ ತೊಡೆದುಹಾಕುವ ವರೆಗೆ ಅವುಗಳ ಸಂಸ್ಕಾರಗಳು ನಮ್ಮ ಕಾರಣಶರೀರದ ಮೇಲೆ ಉಳಿದುಕೊಳ್ಳುವುವು. ಪ್ರತಿಕ್ಷಣವೂ ರೂಪುಗೊಳ್ಳುತ್ತಿರುವ ಎಲ್ಲ ಸಂಸ್ಕಾರಗಳ ಪೂರ್ಣ ಭೋಗವು ಸಾಮಾನ್ಯವಾಗಿ ಇಡೀ ಜೀವನಮಾನದಲ್ಲಿಯೆ ಸಾಧ್ಯವಾಗುವುದಿಲ್ಲ. ಹೀಗೆ, ನಮ್ಮ ಜೀವನವು ಕೊನೆ-ಗೊಂಡಾಗಲೂ ಎಷ್ಟೋ ಸಂಸ್ಕಾರಗಳು ನಮ್ಮೊಳಗೆ ಸಂಗ್ರಹವಾಗಿ ಉಳಿದೇ ಇರುತ್ತವೆ. ಇವೇ ಸಂಸ್ಕಾರಗಳು ನಮಗೆ ತಮ್ಮ ಭೋಗದ ಸುಸಂಧಿಯ-ನ್ನೊದಗಿಸಲು ನಮ್ಮ ಪುನರ್ಜನ್ಮಕ್ಕೆ ಕಾರಣವಾಗುತ್ತವೆ. ಆದರೆ ದುರ್ದೈವದಿಂದ ನಾವು ಅವುಗಳನ್ನು ಮುಗಿಸಿಬಿಡುವ ಬದಲು ತೀರಿಹೋದುವುಗಳಿ-ಗಿಂತ ಹೆಚ್ಚು ಸಂಸ್ಕಾರಗಳನ್ನುಂಟುಮಾಡಿಕೊಳ್ಳುವೆವು.

ನಮ್ಮ ಮಾರ್ಗದಲ್ಲಿ ಇನ್ನೊಂದು ಪ್ರಬಲವಾದ ಆತಂಕವು ನಮ್ಮ ದುಃಖ–ವಿಪತ್ತುಗಳ ಮೂಲಕವುಂಟಾಗುವುದು. ಜಗತ್ತಿನಲ್ಲಿ ಪ್ರತಿಯೊಬ್ಬನೂ ತನ್ನ ದುಃಖಗಳನ್ನು ಕುರಿತು ದೂರುವನಲ್ಲದೆ ಅವುಗಳನ್ನು ತೊಲಗಿಸಬಯಸುತ್ತಾನೆ. ಆದರೆ ಅವನು ಸರಿಯಾದ ಸಾಧನದ ಕಡೆಗೆ ಉಪೇಕ್ಷೆಮಾಡುವನು. ದುಃಖಗಳನ್ನು ದೂರಮಾಡಲು ಇಚ್ಛೆಗಳ ತೃಪ್ತಿಯೊಂದೇ ದಾರಿಯೆಂದು ಅವನು ಬಗೆಯುತ್ತಾನೆ. ಆದರೆ ಅದು ಪರಿಹಾರವಲ್ಲ. ಸಾಮಾನ್ಯವಾಗಿ ದುಃಖಗಳು ತಿರಸ್ಕರಣೀಯವೆಂದು ಬಗೆಯಲಾಗಿದೆ; ಆದರೆ ಅವುಗಳನ್ನು ವರಗಳೆಂದು ತಿಳಿದು ಅವುಗಳಿಗಾಗಿ ದೇವರನ್ನು ಪ್ರಾರ್ಥಿಸಿ ಆತ್ಮಸಂತೋಷದಿಂದ ಅವುಗಳನ್ನನುಭವಿಸಿದ ಋಷಿಗಳಾಗಿ ಹೋಗಿದ್ದಾರೆ. ದುಃಖಗಳ ಮೂಲವನ್ನು ಶೋಧಿಸಿದಾಗ ಈ ಸಮಸ್ಯೆಯ ಗುಟ್ಟು ಸ್ಪಷ್ಟವಾಗುವುದು. ಸೃಷ್ಟಿಯನ್ನು ನಿರ್ಮಿಸಬೇಕೆಂಬ ಭಗವಂತನ ಇಚ್ಛೆಯ ಪರಿಣಾಮವಾಗಿ ಜೀವವು ಚೇತನಯುಕ್ತವಾಗಿದೆ. ಅದರಂತೆ ಅದು ತನ್ನ ಪುಟ್ಟ ಸೃಷ್ಟಿಯನ್ನು ರೂಪಿಸಲಾರಂಭಿಸಿ ಅದರ ವಸ್ತುಗಳನ್ನು ತನ್ನ ಸುತ್ತಲೂ ಶೇಖರಿಸಿತು. ಒಂದು ಚಲನ ಅಥವಾ ಕ್ಷೋಭವು ಸೃಷ್ಟಿಯ ನಿರ್ಮಾಣದಲ್ಲಿ ಮುಖ್ಯ ಕಾರಣವಾದಂತೆ ಜೀವದ ಚಿಕ್ಕ ಸೃಷ್ಟಿಯಲ್ಲಿಯೂ ಈ ಕ್ಷೋಭವು ಆವಶ್ಯಕವಾಗಿದೆ. ನಾವು ಕೂಡ ಇಚ್ಛಾಶಕ್ತಿಯನ್ನೂ ಹೊಂದಿದ್ದು ಈ ಸೃಷ್ಟಿಯನ್ನಾರಂಭಿಸಲು ಅಗತ್ಯವಾದ ಅಂಶಗಳಿಗೆ ಬಲವನ್ನೀಯಲು ಅದನ್ನುಪಯೋಗಿಸುವೆವು. ಅವೇ ನಮ್ಮೆದುರು ಹರ್ಷ–ದುಃಖಗಳ, ಕಷ್ಟ–ಸುಖಗಳ ರೂಪದಲ್ಲಿ ಕಾಣಿಸಿಕೊಳ್ಳುವುವು. ಮನಸ್ಸಾದರೂ ಸತತವಾಗಿ ಕಾರ್ಯಪ್ರವೃತ್ತವಾಗಿರುವುದರಿಂದ ಒಂದು ಪದಾರ್ಥದ ಬಗ್ಗೆ ನಮ್ಮಲ್ಲಿ ಮೆಚ್ಚುಗೆಯನ್ನೂ ಮತ್ತೊಂದರ ಬಗ್ಗೆ ತಿರಸ್ಕಾರವನ್ನೂ ಹುಟ್ಟಿಸಿ ಎರಡು ಅತಿರೇಕಗಳನ್ನುಂಟುಮಾಡುತ್ತದೆ. ಈ ಪ್ರಕಾರ ದುಃಖಗಳು ಜನ್ಮತಾಳುತ್ತವೆ. ಇದೆಲ್ಲವೂ ಮಾನವಮನಸ್ಸಿನ ಸೃಷ್ಟಿಯಾಗಿದ್ದು ಪದಾರ್ಥಗಳ ಸರಿಯಾದ ಸಂಬಂಧವನ್ನು ಕುರಿತಾದ ನಮ್ಮ ಅಜ್ಞಾನದ ಪರಿಣಾಮವಾಗಿದೆ. ನಮ್ಮ ಮನೋವಿಕಾರಗಳು, ಭಾವನೆಗಳು ಮತ್ತು ಉದ್ವೇಗಗಳು ಈ ದುಃಖಗಳನ್ನು ಹೆಚ್ಚಿಸುವುದರಲ್ಲಿ ತುಂಬಾ ಸಹಭಾಗಿಗಳಾಗುತ್ತವಲ್ಲದೆ ಕೆಲವು ವೇಳೆ ಪೂರ್ಣನಾಶವನ್ನು ಸೂಚಿಸುವಷ್ಟು ಬಲವಾದ ಬಿರುಗಾಳಿಯನ್ನೆಬ್ಬಿಸು-

ತ್ತವೆ. ನಾವು ಸಾಮಾನ್ಯವಾಗಿ ಇದರ ಕಾರಣಗಳನ್ನು ಪರಿಸ್ಥಿತಿಗಳ ಮೇಲೆ ಆರೋಪಿಸುತ್ತೇವೆ. ಆದರೆ ಅದು ತಪ್ಪು ಕಲ್ಪನೆ. ಮಾನವದೇಹರೂಪ ದಲ್ಲಿಯ ಮನುಷ್ಯನ ಬಾಹ್ಯವಿಸ್ತರಣಕ್ಕೆ ಮನಸ್ಸೇ ಕೇಂದ್ರವಾಗಿದ್ದು ದೇಹದ ಮೂಲಕವಾಗಿ ಕಾಣಿಸಿಕೊಳ್ಳುವುದೆಲ್ಲವೂ ಮನಸ್ಸೆಂಬ ಕೇಂದ್ರದಿಂದಲೇ ಹೊರಡುತ್ತದೆ. ನಮ್ಮ ಮನಸ್ಸು ಸಮತೋಲ ಸ್ಥಿತಿಯನ್ನು ಹೊಂದಿದರೆ ಪರಿಸ್ಥಿತಿ ಮತ್ತು ವಾತಾವರಣಗಳು ಅದರ ಮೇಲೆ ಪರಿಣಾಮ ಮಾಡ-ಲಾರವು; ಅಲ್ಲದೆ ಅಂತರಂಗದಲ್ಲಿ ಯಾವ ಕ್ಷೋಭವೂ ಉಂಟಾಗುವುದಿಲ್ಲ. ಎಲ್ಲ ಪರಿಸ್ಥಿತಿಗಳಲ್ಲಿಯೂ ಶಾಂತಿ-ಸಮಾಧಾನಗಳೇ ಪ್ರಬಲವಾಗಿರುತ್ತವೆ. ವಿಕಾರಗಳೂ ಆವೇಶ–ಇಚ್ಛೆಗಳೂ ತಮ್ಮ ಉಗ್ರತೆಯನ್ನು ಕಳೆದುಕೊಳ್ಳು-ವುದರಿಂದ ಸುಖ-ದುಃಖಾದಿಗಳು ನಮ್ಮ ದೃಷ್ಟಿಯಿಂದ ಮಾಯವಾಗುವುವು. ದುಃಖಗಳಿಗೆ ನಮ್ಮ ಇಚ್ಛೆಗಳೇ ಮುಖ್ಯ ಕಾರಣ. ಆದುದರಿಂದ ದುಃಖಗಳ ಪರಿಹಾರದ ಒಂದೇ ಒಂದು ಉಪಾಯವೆಂದರೆ ನಮ್ಮ ಇಚ್ಛೆಗಳನ್ನು ಕಡಮೆ-ಮಾಡುವುದು. ಇಚ್ಛೆಗಳು ಕಡಮೆಯಾದಷ್ಟು ದುಃಖಗಳೂ ಕಡಮೆಯಾ-ಗುವುವು. ಆದರೆ ನಿರಿಚ್ಛನಾಗುವುದು ಬೇರೆ ಪ್ರಶ್ನೆ. ಇಚ್ಛೆಗಳು ಬಲೆಯಂತಿದ್ದು ನಾವು ಅದರಲ್ಲಿ ಸಿಕ್ಕಿಬಿದ್ದಿದ್ದೇವೆ. ನಾವು ಅದರಿಂದ ಬಿಡಿಸಿಕೊಳ್ಳಲು ಪ್ರಯ-ತ್ನಿಸಿದಂತೆಲ್ಲ ಅದರ ಎಳೆಗಳು ಬಿಗಿಯಾಗುತ್ತ ಹೋಗುವುವು. ಆ ಜಾಲದಿಂದ ಬಿಡುಗಡೆ ಹೊಂದುವ ಒಂದೇ ಉಪಾಯವೆಂದರೆ ಅವುಗಳ ಮೇಲಿಂದ ನಮ್ಮ ಲಕ್ಷ್ಯವನ್ನು ತಿರುಗಿಸಿ ಕೇವಲ ಸತ್ಯವಸ್ತುವಿನ ಮೇಲೆ ಕೇಂದ್ರೀಕರಿಸುವುದು. ಅವುಗಳ ಕಡೆಗೆ ದುರ್ಲಕ್ಷ್ಯದಿಂದಿರುವ ಅಭ್ಯಾಸವನ್ನು ಬೆಳೆಸಿಕೊಂಡರೆ ಅವು ನಮ್ಮ ದೃಷ್ಟಿಯಿಂದ ತೀವ್ರವೇ ಅಡಗಲಾರಂಭಿಸಿ ನಮ್ಮ ದುಃಖಗಳು ಕಡಮೆ ಯಾಗುವುವು. ಯಾವಾಗಲೂ ಸತ್ಯವೊಂದೇ ನಮ್ಮೆದುರಿನಲ್ಲುಳಿದು ಉಳಿದು-ದೆಲ್ಲ ತನ್ನ ಸ್ವಾರಸ್ಯವನ್ನಾಗಲಿ ಪ್ರಾಮುಖ್ಯವನ್ನಾಗಲಿ ಕಳೆದುಕೊಳ್ಳುವುದು.

ಕಷ್ಟ-ಕಾರ್ಪಣ್ಯಗಳು ಜೀವನದಲ್ಲಿ ಸಂಪೂರ್ಣವಾಗಿ ಇಲ್ಲದಂತಾಗು-ವುದು ಅಸಂಭವವೂ ಅಸ್ವಾಭಾವಿಕವೂ ಆಗಿದೆ. ವಸ್ತುಸ್ಥಿತಿಯೇನೆಂದರೆ, ಅವು ನಮ್ಮ ಸುಧಾರಣೆಗಾಗಿಯೆ ಇರುವುವು. ಅವು, ರೋಗಿಗೆ ಮತ್ತೆ ಆರೋಗ್ಯವನ್ನು ತರುವುದಕ್ಕಾಗಿ ಕೊಡಲಾಗುವ ಔಷಧದ ಕಹಿ ಗುಳಿಗೆ-ಗಳಿದ್ದಂತೆ. ವಸ್ತುವು ಎಷ್ಟೇ ಒಳ್ಳೆಯದಾಗಿದ್ದರೂ ಅದರ ದುರುಪಯೋ-

ಗವು ತೊಂದರೆಯನ್ನುಂಟುಮಾಡುತ್ತದೆ. ದುಃಖಗಳ ಸ್ಥಿತಿಯಾದರೂ ಹೀಗೆಯೆ. ಪ್ರತಿಯೊಂದು ವಸ್ತುವನ್ನು ತಕ್ಕ ಸಮಯದಲ್ಲಿ, ಯೋಗ್ಯ ರೀತಿಯಲ್ಲಿ ಉಪಯೋಗಿಸಿದರೆ ಅದು ಕಾಲಕ್ರಮದಲ್ಲಿ ತಪ್ಪದೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ದುಃಖಗಳು ನಿಜವಾಗಿಯೂ ನಮ್ಮ ದಾರಿಯನ್ನು ಸುಗಮಗೊಳಿಸುವ ಉತ್ತಮ ಮಾರ್ಗದರ್ಶಿಗಳು ಜೀವನದ ಸಾಮಾನ್ಯ ಹಂತದಲ್ಲಿರುವ ಮನುಷ್ಯನ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಅವು ಅತ್ಯಂತ ಸಹಾಯಕವಾಗಿವೆ. ಪ್ರಾಪಂಚಿಕ ಹಾಗು ಸಾಂಸಾರಿಕ ಜೀವನದ ಕಷ್ಟಗಳನ್ನು ಕುರಿತು ನಮ್ಮ ಗುರುಗಳು ಹೀಗೆ ಹೇಳುತ್ತಿದ್ದರು:

"ನಮ್ಮ ಮನೆಯು ಸಮಾಧಾನ–ತಿತಿಕ್ಷೆಗಳ ಶಿಕ್ಷಣಭೂಮಿಯಾಗಿದೆ. ಗೃಹಸ್ಥಜೀವನದ ವಿಪತ್ತುಗಳನ್ನು ಮೌನವಾಗಿ ಸಹಿಸುವುದೇ ನಮಗೆ ಎಲ್ಲಕ್ಕಿಂತಲೂ ಶ್ರೇಷ್ಠ ತಪಸ್ಸು. ಆದುದರಿಂದ ಎಲ್ಲ ಪ್ರಸಂಗಗಳಲ್ಲಿಯೂ ನಾವು ಮಾಡಬೇಕಾದ ಕಾರ್ಯವೆಂದರೆ ಕ್ರೋಧ–ಶೋಕಗಳ ಭಾವನೆಗಳಿಗೆಡೆಗೊಡದೆ ಧೈರ್ಯವನ್ನು ತಾಳಿ ನಮ್ಮದೇ ತಪ್ಪೆಂದು ತಿಳಿದು ಶಾಂತ ಮನಸ್ಸಿನಿಂದ ಸಹಿಸಿಕೊಳ್ಳಬೇಕು. ಅರಣ್ಯದ ಏಕಾಂತವಾಸವೂ ಜಗತ್ತಿನ ಎಲ್ಲ ವ್ಯಾಪಾರಗಳಿಂದ ದೂರವಾಗಿರುವುದೂ ಕೆಲವರಿಗೆ ಸಹಿಷ್ಣುತೆ–ಸಮಾಧಾನಗಳನ್ನು ಬೆಳೆಸುವ ಸಾಧನಗಳಾಗಿರಬಹುದು. ಆದರೆ ನಮಗೆ ನಮ್ಮ ಇಷ್ಟಮಿತ್ರರ ನಿಂದೆ–ಮೂದಲಿಕೆಗಳೇ ಮಿಗಿಲಾದ ತಪಸ್ಸೂ ಯಶಸ್ಸಿನ ನಿಶ್ಚಿತ ಸಾಧನಗಳೂ ಆಗಿವೆ." ನಿಜಾಂಶವೇನೆಂದರೆ, ವಿಪತ್ತು-ತೊಂದರೆಗಳನ್ನು ಶಾಂತವಾಗಿ ಸಹಿಸುವುದು ನಮ್ಮ ಸುಧಾರಣೆಗೆ ಬಹುಮಟ್ಟಿಗೆ ಕಾರಣವಾಗುವುದರಿಂದ ಅವು ನಮ್ಮ ಪ್ರಗತಿಗೆ ಅಮೂಲ್ಯ ಸಂಪತ್ತಾಗಿವೆ. ಅವುಗಳ ದುರುಪಯೋಗದಿಂದ ಮಾತ್ರ ನಾವು ಅವುಗಳ ಪ್ರಭಾವವನ್ನು ಕೆಡಿಸಿ ಅವುಗಳಿಂದಾಗುವ ಉತ್ತಮ ಲಾಭಗಳಿಗೆ ಎರವಾಗುತ್ತೇವೆ.

ಸಾಕ್ಷಾತ್ಕಾರದಲ್ಲಿ ತ್ಯಾಗ ಅಥವಾ ವೈರಾಗ್ಯವು ನಿಸ್ಸಂದೇಹವಾಗಿ ಆಗತ್ಯವಾದ ಒಂದು ಮೆಟ್ಟಿಲಾಗಿದೆ. ನಾವು ವೈರಾಗ್ಯವನ್ನು ಬೆಳೆಸಿಕೊಳ್ಳುವ ವರೆಗೆ ಮಾಯೆಯ ಪಾಶಗಳಿಂದ ಮುಕ್ತರಾಗಲಾರೆವು. ಆದರೆ ಅದರ್ಥವು ಮನೆಯೊಂದಿಗೂ ಮನೆಯವರೊಂದಿಗೂ ಜಗತ್ತಿನ ಎಲ್ಲ ವ್ಯವಹಾರ ಗಳೊಂದಿಗೂ ನಮ್ಮ ಸಂಬಂಧವನ್ನು ಕಡಿದುಕೊಂಡು ಪರಿವ್ರಾಜಕನಾಗ-

ಬೇಕೆಂದಲ್ಲ. 'ವೈರಾಗ್ಯವನ್ನು ಬೆಳೆಸುವ ಏಕಮಾತ್ರ ಉಪಾಯವೆಂದರೆ ಮನೆಮಾರುಗಳನ್ನು ತೊರೆದು ಜಗತ್ತಿನ ಎಲ್ಲ ಬಂಧನಗಳನ್ನು ಬಿಸುಟು ಏಕಾಂತವನ್ನಾಶ್ರಯಿಸುವುದೆಂ'ದು ಅಭಿಪ್ರಾಯಪಡುವವರೊಂದಿಗೆ ನಾನು ಒಮ್ಮತನಾಗುವುದಿಲ್ಲ. ಇಂಥ ಬಲವಂತದ ಉಪಾಯಗಳ ಮೂಲಕ ಸಾಧಿಸಲಾಗುವ ಸಂನ್ಯಾಸವು ಕ್ವಚಿತ್ತಾಗಿಯೆ ಸ್ವಾಭಾವಿಕವಾಗಿರುವುದು. ಏಕೆಂದರೆ ತೋರಿಕೆಗಾಗಿ ಬಲವಂತದ ಸಂನ್ಯಾಸವನ್ನು ತಾಳಿದಾಗಲೂ ಅವರು ಆಂತರಿಕವಾಗಿ ಇನ್ನೂ ಪ್ರಪಂಚಕ್ಕೆ ಅಂಟಿಕೊಂಡಿರುವ ಸಂಭವವಿದೆ. ನಿಸ್ಸಂಶಯವಾಗಿ ನಾವು, ಗೃಹಸ್ಥರು, ಅನೇಕ ವಿಷಯಗಳ ಕಡೆಗೆ ಗಮನ ಕೊಡಬೇಕಾಗಿದೆ: ನಮ್ಮ ಕುಟುಂಬವನ್ನು ಪೋಷಿಸಬೇಕು; ಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸಬೇಕು; ಅವರ ಬೇಡಿಕೆ, ಆವಶ್ಯಕತೆಗಳ ಕಡೆಗೆ ಗಮನಕೊಡಬೇಕು; ಶೀತೋಷ್ಣಗಳಿಂದಲೂ ರೋಗಾದಿ ಪೀಡೆಗಳಿಂದಲೂ ಅವರನ್ನು ಸಂರಕ್ಷಿಸಬೇಕು. ಇವೇ ಅಗತ್ಯಗಳಿಗಾಗಿ ನಾವು ಹಣ ಗಳಿಸುವೆವು. ಆಸ್ತಿಯನ್ನು ಮಾಡುವೆವು. ನಮಗೆ ಸಂಬಂಧಪಟ್ಟ ವಸ್ತುಗಳ ಬಗ್ಗೆ ನಾವು ತಾಳುವ ಅನಾವಶ್ಯಕವಾದ ಆಸಕ್ತಿಯೆ ನಿಜವಾದ ಅನಿಷ್ಟವಾಗಿದೆ. ಇದೇ ನಮ್ಮ ಕಷ್ಟಗಳಿಗೆ ಮುಖ್ಯ ಕಾರಣ. ಆದರೆ ನಾವು ಜೀವನದಲ್ಲಿ ಪ್ರತಿಯೊಂದು ಕಾರ್ಯವನ್ನು ನಮ್ಮ ಕರ್ತವ್ಯವೆಂದು ತಿಳಿದು ರಾಗದ್ವೇಷಾದಿ ಭಾವನೆಗಳಿಲ್ಲದೆ ಮಾಡಬಲ್ಲೆವಾದರೆ ನಾವು ಒಂದು ರೀತಿಯಿಂದ ಪ್ರಾಪಂಚಿಕ ಮೋಹಪಾಶಗಳಿಂದ ಮುಕ್ತರಾದಂತೆಯೆ. ಅನೇಕ ವಸ್ತುಗಳನ್ನು ಗಳಿಸಿ-ಬಳಸಿಯೂ ನಿಜವಾದ ಅರ್ಥದಲ್ಲಿ ಪ್ರಪಂಚವನ್ನು ತ್ಯಾಗಮಾಡಿದಂತೆಯೆ. ಆಗ ಪ್ರತಿಯೊಂದು ಪದಾರ್ಥವೂ ನಮಗೆ ಒಪ್ಪಿಸಲಾದ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ಭಗವಂತನು ಕೊಟ್ಟ ನಿಕ್ಷೇಪವೆಂದು ತೋರುವುದು. ತ್ಯಾಗದ ನಿಜವಾದ ಅರ್ಥವು ಅನಾಸಕ್ತಿಯೆ ಹೊರತು ವಸ್ತುಗಳ ಅನನುಭೋಗವಲ್ಲ. ಪದಾರ್ಥಗಳ ಅನುಭೋಗವೂ ಪ್ರಾಪಂಚಿಕ ಬಂಧನಗಳೂ ಅಗತ್ಯವೆನಿಸಿದ ಗೃಹಸ್ಥ ಜೀವನವು, ತ್ಯಾಗಮಾರ್ಗದಲ್ಲಿಯೂ ತತ್ಪರಿಣಾಮವಾಗಿ ಸಾಕ್ಷಾತ್ಕಾರದಲ್ಲಿಯೂ ಅಡ್ಡಿಯಾಗಲಾರದು. ಆದರೆ ನಾವು ಮಾತ್ರ ನಮಗೆ ಸಂಬಂಧಿಸಿದ ವಸ್ತುಗಳಲ್ಲಿ ಅನಾವಶ್ಯಕವಾಗಿ ಆಸಕ್ತರಾಗಿರಬಾರದು. ಕೊನೆಯ ವರೆಗೂ ಗೃಹಸ್ಥ ಜೀವನವನ್ನು ಸಾಗಿಸಿಯೆ ಪೂರ್ಣತೆಯ ಪರಮಾ-

ವಧಿಯನ್ನು ಮುಟ್ಟಿದ ನಂತರ ಉದಾಹರಣೆಗಳೆಷ್ಟೋ ಇವೆ. ವಸ್ತುತಃ ವೈರಾಗ್ಯವು ಪದಾರ್ಥಗಳ ಪರಿವರ್ತನಶೀಲತೆಯನ್ನೂ ನಶ್ವರತೆಯನ್ನೂ ನಮ್ಮ ಗಮನಕ್ಕೆ ತಂದುಕೊಟ್ಟು ಇಂಥ ವಸ್ತುಗಳಲ್ಲಿ ಅನಾಸಕ್ತಿಯನ್ನು ಹುಟ್ಟಿಸುವ ಒಂದು ಸ್ಥಿತಿ ಅಥವಾ ಮಾನಸಿಕ ಅವಸ್ಥೆ. ಸಂನ್ಯಸ್ತವೃತ್ತಿಯವನ ದೃಷ್ಟಿಯು ಪ್ರತಿಕ್ಷಣವೂ ಸ್ಥಿರವಾದ ಹಾಗು ಸನಾತನವಾದ ಸತ್ಯದ ಕಡೆಗೇ ನೆಟ್ಟಿದ್ದು, ಆತನು ರಾಗ-ದ್ವೇಷಾದಿ ಭಾವಗಳಿಂದ ವಿಮುಕ್ತನಾಗಿರುವನು. ಇದೇ ಶಬ್ದಶಃ ವೈರಾಗ್ಯ. ಈ ಮಾನಸಿಕ ಸ್ಥಿತಿಯನ್ನು ಹೊಂದಿದಾಗ ನಾವು ಇಚ್ಛೆಗಳಿಂದ ಮುಕ್ತರಾಗುವೆವು. ನಮಗೆ ದೊರೆಯುವಷ್ಟರಿಂದಲೇ ತೃಪ್ತರಾಗಿರುತ್ತೇವೆ. ಇಚ್ಛೆಗಳು ನಾಶವಾದರೆ ಸಂಸ್ಕಾರಗಳ ನಿರ್ಮಾಣವು ನಿಂತಂತೆಯೆ. ಈಗ ಉಳಿಯುವುದೆಂದರೆ, ನಮ್ಮ ಜೀವನಾವಧಿಯಲ್ಲಿ ಪೂರ್ವನಿರ್ಮಿತ ಸಂಸ್ಕಾರಗಳ ಪರಿಣಾಮವನ್ನು ಭೋಗಿಸುವುದೊಂದೇ. ಕಾರಣಶರೀರದಿಂದ ನಮ್ಮ ಆಚಾರ-ವಿಚಾರಗಳ ಸಂಸ್ಕಾರಗಳನ್ನು ತೆಗೆದುಹಾಕುವುದರಲ್ಲಿ ನಿಸರ್ಗವೂ ನಮಗೆ ಸಹಾಯಕವಾಗಿ ಭೋಗಭೂಮಿಯನ್ನು ನಿರ್ಮಿಸುವುದು. ಈ ಕವಚಗಳೆಲ್ಲ ಕರಗಿಹೋದಾಗ ನಾವು ಅಸ್ತಿತ್ವದ ಸೂಕ್ಷ್ಮತರ ರೂಪಗಳನ್ನು ಧರಿಸುವೆವು.

ನಮ್ಮ ಆಚಾರ – ವಿಚಾರಗಳನ್ನು ಅಂಕಿತದಲ್ಲಿಡಬೇಕಾದರೆ, ಕ್ಷಣಮಾತ್ರವೂ ವಿಶ್ರಾಂತಿ ಪಡೆಯದ ಮನಸ್ಸಿನ ಕಾರ್ಯಗಳು ಯುಕ್ತವಾಗುವಂತೆ ಲಕ್ಷ್ಯಕೊಡಬೇಕಾಗುವುದು. ಎಷ್ಟೋ ಸಲ ಧರ್ಮಬೋಧಕರು, ಮನಸ್ಸು ನಮ್ಮ ಕಡುವೈರಿಯೆಂದು ಸಾರಿ ಅದಕ್ಕೆ ಎಲ್ಲ ಬಗೆಯ ಕೆಟ್ಟ ಹೆಸರುಗಳನ್ನಾರೋಪಿಸಿ ಕಟುವಾದ ಶಬ್ದಗಳಲ್ಲಿ ಅದನ್ನು ಬಯ್ಯುದನ್ನು ಕೇಳಿದ್ದೇನೆ. ಇದರ ಕಾರಣವು ಸ್ಪಷ್ಟವಾಗಿದೆ. ನಮ್ಮಲ್ಲಿಯ ಎಲ್ಲ ಕೆಟ್ಟತನಕ್ಕೂ ಅದೇ ಕಾರಣವೆಂದು ತಿಳಿದುದರಿಂದ ಅದನ್ನು ಅದುಮುವಂತೆಯೂ ಅದರ ಅಪ್ಪಣೆಗಳನ್ನು ಪಾಲಿಸದಿರುವಂತೆಯೂ ಜನರಿಗೆ ಅವರು ಬೋಧಿಸುವರು. ಆದರೆ ಸಾಮಾನ್ಯವಾಗಿ ಮನಸ್ಸಿನ ಬಹುಮುಖವಾದ ಚಟುವಟಿಕೆಗಳನ್ನು ನಿಗ್ರಹಿಸಲು ಅಥವಾ ಅದರ ಅಪ್ಪಣೆಗಳನ್ನು ತಿರಸ್ಕರಿಸಲು ಜನರಿಗೆ ಕಠಿಣವೆನಿಸುತ್ತದೆ. ಆದುದರಿಂದ ಈ ವಿಷಯಕವಾದ ತಾತ್ತ್ವಿಕ ಉಪದೇಶವೂ ಉಪನ್ಯಾಸಗಳೂ ಜನತೆಗೆ ಬಹಳ ಉಪಯುಕ್ತವಾಗಲಾರವು; ಮತ್ತು ಜನ

ಉಪನ್ಯಾಸಗಳನ್ನು ಕೇಳುವ ಯಾವ ಮನುಷ್ಯನೂ ಈ ಗುರಿಯನ್ನು ಇದು-ವರೆಗೆ ವ್ಯವಹಾರ್ಯ ರೀತಿಯಲ್ಲಿ ಸಾಧಿಸಿಲ್ಲ. ಅಲ್ಲದೆ ವ್ಯಕ್ತಿಯ ಮನಸ್ಸಿನ ಚಟುವಟಿಕೆಗಳು ಸತತವಾಗಿ ಹೆಚ್ಚುವಂತೆ ಇಂದಿನ ಪರಿಸ್ಥಿತಿ ಮತ್ತು ವಾತಾ-ವರಣಗಳು ಬಹುಮಟ್ಟಿಗೆ ಸಹಾಯಕವಾಗಿವೆ. ಸಾಧಾರಣವಾಗಿ ಪ್ರತಿ ಯೊಬ್ಬನೂ ಬಡತನ, ಅ-ಸುರಕ್ಷಿತತೆ,ದುಃಖ ಮತ್ತು ವೈರಗಳ ತೀಕ್ಷ್ಣವಾದ ಸಮಸ್ಯೆಗಳನ್ನೆದುರಿಸುತ್ತಿದ್ದ ತನ್ನ ಜೀವನವು ಬದುಕಿಗಾಗಿ ಕಠಿಣವಾದ ಹೋರಾಟವೆಂದು ತಿಳಿಯುವನಲ್ಲದೆ, ಅದರ ಪರಿಣಾಮದಿಂದ ಮುಕ್ತನಾಗಿ-ರಲು ಆತನಿಗೆ ಸಾಧ್ಯವಿಲ್ಲದಂತಾಗಿದೆ. ಇದರ ಫಲವೆಂದರೆ ನಿರಂತರ ಕ್ಷೋಭೆ ಮತ್ತು ಅಶಾಂತಿ. ನಾವು ವಾಯುಮಂಡಲದಿಂದ ಇದನ್ನೇ ಉಚ್ಛ್ವಾಸಿಸು-ವೆವು ಮತ್ತು ತತ್ಪರಿಣಾಮವಾಗಿ ಪರಿಸ್ಥಿತಿ-ಪರಿಸರಗಳಿಂದ ಪ್ರಭಾವಿತರಾಗು ತ್ತೇವೆ. ನಮ್ಮ ವ್ಯಷ್ಟಿಮನಸ್ಸು ಗಾಳಿಬೀಸಿದತ್ತ ಮುಖತಿರುಗಿಸುವ ವಾಯುಸೂಚಕ ಯಂತ್ರದಂತಾಗಿದೆ. ಯಾವನು ಧೈರ್ಯದಿಂದ ಅವುಗಳ ಪರಿಣಾಮಗಳಿಂದ ತನ್ನನ್ನು ದೂರವಾಗಿರಿಸಿಕೊಳ್ಳುವನೋ ಅವನೇ ಈ ಹೋರಾಟದಲ್ಲಿ ನಿಜವಾದ ಶೂರ.

ಪ್ರತಿಯೊಂದು ಕೆಟ್ಟದೂ ಮನಸ್ಸಿನಲ್ಲಿಯೆ ಹುಟ್ಟುವುದರಿಂದ ಅದೆ-ಲ್ಲಕ್ಕೂ ಮನಸ್ಸೇ ಹೊಣೆಯೆಂದು ಅಭಿಪ್ರಾಯಪಡುವವರೊಂದಿಗೆ ನಾನು ನಿಸ್ಸಂದೇಹವಾಗಿ ಸಮ್ಮತಿಸುವೆನಾದರೂ, ಅದೇ ಮನಸ್ಸೇ ನಮ್ಮನ್ನು ಒಳ್ಳೆಯದರ ಕಡೆಗೂ ಒಯ್ದು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದರಲ್ಲಿ ನೆರವಾಗುವುದೆಂಬುದನ್ನು ಅವರ ಸ್ಮರಣೆಗೆ ತರಬಯಸುವೆನು. ಆದುದ-ರಿಂದ ಮನಸ್ಸಿನಿಂದ ಕೇವಲ ಕೆಟ್ಟದೆಲ್ಲವೂ ಉದ್ಭವಿಸದೆ ಒಳ್ಳೆಯದೂ ಹುಟ್ಟುವುದು. ಕಾರಣ, ಅದನ್ನು ಕಟುವಾದ ಶಬ್ದಗಳಲ್ಲಿ ದೂಷಿಸುವವರ ಪಕ್ಷಕ್ಕೆ ಯಾವ ಸಮರ್ಥನೆಯೂ ಇಲ್ಲ. ಮನಸ್ಸಿನ ದೋಷಯುಕ್ತವಾದ ರೂಪಣದಿಂದ ಹೀಗಾಗುವುದಲ್ಲದೆ ಬೇರೇನೂ ಅಲ್ಲ. ಇದಕ್ಕೆ ತಕ್ಕ ಉಪಾಯವು ಅದನ್ನು ಹಿಸುಕುವುದರಲ್ಲಾಗಲಿ ಕೊಲ್ಲುವುದರ-ಲ್ಲಾಗಲಿ ಇರದೆ ಅದಕ್ಕೆ ಯೋಗ್ಯ ಶಿಕ್ಷಣ ಕೊಡುವುದರಲ್ಲಿದೆ. ಮನಸ್ಸು ಗಡಿಯಾರದ ಲಂಬಕದಂತೆ. ಲಂಬಕದ ಗತಿಯು ನಿಯಂತ್ರಿತ-ವಿರುವವರೆಗೆ ಗಡಿಯಾರವು ಸರಿಯಾಗಿ ನಡೆಯುವುದು. ಗತಿಯಲ್ಲಿ ಭಂಗ

ಬಂದರೆ ಕೆಡುವುದು. ಅದರಂತೆ ಈ ಮಾನವೀ ಗಡಿಯಾರಕ್ಕೆ ಮನೋ-ಗತಿಯ ನಿಯಂತ್ರಣ ಮತ್ತು ಹೊಂದಿಕೆಯು ಆವಶ್ಯಕ. ಅದನ್ನು ರೂಪಿ-ಸುವ ಹಾಗು ಅದರ ಕಾರ್ಯಗಳನ್ನು ಕ್ರಮಬದ್ಧಗೊಳಿಸುವ ಪದ್ಧತಿಗಳಾ ದರೂ ಬಹು ಸರಳವಾಗಿವೆ. ನಿಜವಾಗಿ ನೋಡಿದರೆ, ಮನಸ್ಸನ್ನು ಬಿರಾಮ-ಕಾಲದಲ್ಲಿ ಗೊತ್ತುಗುರಿಯಿಲ್ಲದಂತೆ ಅಲೆದಾಡಲು ಬಿಟ್ಟು ನಾವೇ ಅದನ್ನು ಕೆಡಿಸಿದ್ದೇವೆ. ಈ ದುರಭ್ಯಾಸವು ಎಷ್ಟೋ ವರ್ಷಗಳ ವರೆಗೆ ಮುಂದುವರೆ-ದುದರಿಂದ ಅದೀಗ ಅದರ ಸ್ವಭಾವದಂತಾಗಿ ಬಿಟ್ಟಿದೆ. ಈಗ ನಾವು ಅದನ್ನು ನಿಯಂತ್ರಣದಲ್ಲಿಟ್ಟು ನಮ್ಮ ಅಧೀನಗೊಳಿಸಬೇಕೆಂದರೆ ಯಶ ದೊರೆಯದು. ನಾವು ಬಲವಾಗಿ ಅದನ್ನು ಅದುಮಿದಂತೆಲ್ಲ ಅದು ಹೆಚ್ಚು ಪುಟಿದು ಪ್ರತಿಕ್ರಿಯೆಯನ್ನು ತೋರಿ ಹೆಚ್ಚು ಕ್ಷೋಭವನ್ನುಂಟುಮಾಡುತ್ತದೆ. ಅದರ ಚಟುವಟಿಕೆಗಳನ್ನು ನಿಯಂತ್ರಣಗೊಳಿಸಲು ತಕ್ಕ ಪದ್ಧತಿಯೆಂದರೆ, ನಾವು ಧ್ಯಾನದಲ್ಲಿ ಮಾಡುವಂತೆ, ಅದನ್ನು ಒಂದು ಪವಿತ್ರವಾದ ವಿಚಾರದ ಮೇಲೆ ಏಕಾಗ್ರಗೊಳಿಸಿ ಅನಾವಶ್ಯಕವಾದುವುಗಳೆಲ್ಲವನ್ನು ತೊಲಗಿಸಬೇಕು. ಕಾಲಕ್ರಮದಲ್ಲಿ ಸತತಾಭ್ಯಾಸದ ಅನಂತರ ಮನಸ್ಸು ಶಿಸ್ತನ್ನು ಹೊಂದಿ, ಸುನಿಯಂತ್ರಿತವಾಗಿ, ಆಂತರಿಕ ಅಸ್ವಸ್ಥತೆಯು ಬಹುಮಟ್ಟಿಗೆ ದೂರವಾಗು-ವುದು. ಅನಪೇಕ್ಷಿತವಾದ ವಿಚಾರಗಳಿಂದ ಮುಕ್ತರಾಗಲು ಶ್ರೇಷ್ಠಮಾರ್ಗ-ವೆಂದರೆ ಅವುಗಳನ್ನು 'ಕರೆಯದೆ ಬಂದ ಅತಿಥಿಗಳೆಂ'ದು ತಿಳಿದು ಅವುಗಳ ಕಡೆಗೆ ದುರ್ಲಕ್ಷ್ಯ ಮಾಡಬೇಕು. ಆಗ ಅವು ನೀರುಕಾಣದ ಸಸಿಗಳಂತೆ ಬಾಡಿಹೋಗಿ ಕೊನೆಗೆ ಒಂದೇ ಪವಿತ್ರ ವಿಚಾರವು ಪ್ರಧಾನವಾಗಿ ಉಳಿಯು-ವುದು. ಇದನ್ನು ಸಾಧಿಸಲು ಏಕಮೇವ ಮಾರ್ಗವೆಂದರೆ ಸಮರ್ಥ ಗುರು-ವಿನ ನೇತೃತ್ವದಲ್ಲಿ ಧ್ಯಾನ ಮಾಡುವುದು. ಧ್ಯಾನದ ಸತತವಾದ ಅಭ್ಯಾಸ ದಿಂದ ಮನಸ್ಸು ಸಮಾಹಿತವೂ ಶಾಂತವೂ ಆಗುವುದಲ್ಲದೆ ಅನಪೇಕ್ಷಿತ ವಿಚಾರಗಳು ನಿಮಗೆ ತೊಂದರೆಕೊಡುವುದನ್ನು ನಿಲ್ಲಿಸುವುವು. ಧ್ಯಾನ-ಸಮಯದಲ್ಲಿ ತಮ್ಮ ಮನಸ್ಸು ಅಲೆದಾಡುವುದೆಂದು ಹೊಸಬರು ಅನೇಕಸಲ ದೂರುವುದನ್ನು ಕೇಳಿದ್ದೇನೆ. ಮೊದಲನೆಯ ದಿನದಿಂದಲೇ ಧ್ಯಾನಸಮಯ ದಲ್ಲಿ ತಮ್ಮ ಮನಸ್ಸು ಸ್ಥಿರವಾಗಬೇಕೆಂದು ಅವರು ಅಪೇಕ್ಷಿಸುವರು. ಆದರೆ ಬೇರೆ ಬೇರೆ ವಿಚಾರಗಳು ಅವರ ಮನಸ್ಸನ್ನು ಮುತ್ತಿದಾಗ ಅವರು ಗಾಬರಿ

ಗೊಳ್ಳುವರು. ನಾವು ನಮ್ಮ ಅಭ್ಯಾಸದಲ್ಲಿ ಮನಸ್ಸಿನ ಮೂಢಾವಸ್ಥೆಯನ್ನು ಸಂಪಾದಿಸಲು ಯತ್ನಿಸದೆ ಅದರ ವಿವಿಧ ಕಾರ್ಯಕಲಾಪಗಳನ್ನು ಸರಿಯಾಗಿ ರೂಪಿಸುವುದಕ್ಕೆ ಹೆಣಗುವೆವೆಂಬುದನ್ನು ಅವರಿಗೆ ಸ್ಪಷ್ಟಪಡಿಸಬಯಸುತ್ತೇನೆ. ನಾವು ಅದರ ಸಹಜಕಾರ್ಯವನ್ನು ನಿಲ್ಲಿಸಬಯಸುವುದಿಲ್ಲ; ಕೇವಲ ಅದನ್ನು ಸುಶಿಕ್ಷಿತ ಹಾಗು ಸುನಿಯಂತ್ರಿತದಶೆಗೆ ತರಬಯಸುತ್ತೇವೆ. ಪ್ರಾರಂಭದಿಂದಲೇ ಮನಸ್ಸಿನ ಚಟುವಟಿಕೆಗಳು ನಿಂತುಹೋದರೆ ಪ್ರಾಯಃ ನಾವು ಧ್ಯಾನಮಾಡುವ ಅಗತ್ಯವೇ ಉಂಟಾಗದು. ಆ ಗುರಿಯನ್ನು ಮುಟ್ಟಲು ಧ್ಯಾನವು ಒಂದು ಸಾಧನಮಾತ್ರ. ಏಕಾಗ್ರತೆಯು ಕಾಲಕ್ರಮದಲ್ಲಿಯ ಅದರ ಸಹಜ ಪರಿಣಾಮ. ಧ್ಯಾನಸಮಯದಲ್ಲಿ ನಮ್ಮ ಮನಸ್ಸಿನಲ್ಲಿ ಸುಳಿಯುವ ಬೇರೆ ವಿಚಾರಗಳನ್ನು ಲಕ್ಷಿಸದೆ ಕೊನೆಯ ವರೆಗೂ ಧ್ಯಾನಮಾಡುವುದೇ ಸರಿಯಾದ ಕ್ರಮ. ನಮಗೆ ಬೇಡವಾದ ವಿಚಾರಗಳನ್ನು ತೊಲಗಿಸಲು ಮಾಡುವ ಮಾನಸಿಕ ಹೋರಾಟವು ಎಷ್ಟೋ ವೇಳೆ ನಿಷ್ಫಲವಾಗುವುದು. ಏಕೆಂದರೆ, ಅದು ಅನೇಕ ವೇಳೆ ಸಾಮಾನ್ಯ ಮನುಷ್ಯನಿಗೆ ತಡೆಯಲು ಸಾಧ್ಯವಾಗದ ಹಾಗು ಹಲವು ಸಲ ಕಠಿಣವಾದ ಮಾನಸಿಕ ಕ್ಷೋಭವನ್ನು ಇಲ್ಲವೆ ಉನ್ಮಾದದಲ್ಲಿ ಪರಿಣಮಿಸುವಂತಹ ಪ್ರಬಲವಾದ ಪ್ರತಿಕ್ರಿಯೆಯನ್ನು ಉಂಟುಮಾಡುತ್ತದೆ. ವೀರ್ಯರಕ್ಷಣೆಯಿಂದ ಸಾಕಷ್ಟು ಓಜಸ್ಸನ್ನು ಸಂಪಾದಿಸಿದವರಿಗೆ ವಿಚಾರಗಳ ಪ್ರವಾಹದೊಂದಿಗೆ ಯಶಸ್ವಿಯಾಗಿ ಹೋರಾಡಿ ಅವುಗಳ ಪ್ರತಿಕ್ರಿಯೆಯ ಪರಿಣಾಮಗಳನ್ನು ಸಹಿಸಲು ಸಾಧ್ಯವಾಗಬಹುದು. ಆದರೆ ಸಾಮಾನ್ಯ ಮನುಷ್ಯನಿಗೆ ಅದು ಪ್ರಾಯಃ ಅಸಾಧ್ಯವೇ ಸರಿ. ವಿಚಾರಗಳನ್ನು ತೊಲಗಿಸಲು ಹೋರಾಡುವ ಬದಲು ನಾವು ಅವುಗಳನ್ನು ನಿರ್ಲಕ್ಷಿಸಿದರೆ ಅವು ಶೀಘ್ರವಾಗಿಯೆ ತಮ್ಮ ಪ್ರಭಾವವನ್ನು ಕಳೆದುಕೊಂಡು ನಮಗೆ ತೊಂದರೆ ಕೊಡುವುದನ್ನು ನಿಲ್ಲಿಸುವುವು. ಆಗ ಅವು, ಯಾವುದನ್ನೂ ಗಮನಿಸದೆ ಮುಂದೆ ಸಾಗುವ ಪಥಿಕರ ಗುಂಪಿನ ಹಿಂದೆ ಬೊಗುಳುವ ನಾಯಿಗಳಂತಾಗುವುವು.

ಕೆಲವರು ಒಡ್ಡುವ ಸರ್ವಸಾಮಾನ್ಯವಾದ ನೆವವೆಂದರೆ, ತಾವು ತುಂಬ ಕೆಲಸದಲ್ಲಿ ತೊಡಗಿರುವುದರಿಂದ ಧ್ಯಾನವನ್ನಾಗಲಿ ಇಂಥ ಬೇರೆ ಸಾಧನಗಳನ್ನಾಗಲಿ ಮಾಡಲು ಸಮಯವಿಲ್ಲವೆಂಬುದು. ಆದರೆ 'ಕೈತುಂಬ ಕೆಲಸ

ವಿದ್ದ ಮನುಷ್ಯನಿಗೆ ಎಲ್ಲಕ್ಕಿಂತ ಹೆಚ್ಚು ವಿರಾಮ' ವೆಂಬುದೊಂದು ಪ್ರಸಿದ್ಧ ನಾಣ್ಣುಡಿಯಿದೆ. ಮನುಷ್ಯನಿಗೆ ಕೆಲಸಕ್ಕಿಂತಲೂ ಹೆಚ್ಚು ಸಮಯವು ವಿರಾಮದಲ್ಲಿ ವಿನಿಯೋಗಿಸಲು ದೊರೆಯುವುದೆಂದು ನನಗನಿಸುತ್ತದೆ. ಸಮಯಾಭಾವದ ಅವರ ದೂರು ಕೇವಲ ಅದರ (ಸಮಯದ) ತಪ್ಪು ಹೊಂದಿಕೆಯ ಮೂಲಕವಾಗಿದೆ. ನಮ್ಮ ಸಮಯವನ್ನು ನಾವು ಆದಷ್ಟು ಹೆಚ್ಚು ಲಾಭ ಪಡೆಯುವಂತೆ ಉಪಯೋಗಿಸಿದರೆ ಅದರ ಕೊರತೆಯ ಅಥವಾ ಅಭಾವದ ವಿಷಯವಾಗಿ ದೂರುವ ಕಾರಣವೆ ಇಲ್ಲ. ಮತ್ತೆ ಕೆಲವರು ಸ್ವಲ್ಪ ಪ್ರಾಮಾಣಿಕರಾಗಿ, ಭಕ್ತಿಪರ ಕಾರ್ಯಗಳಿಂದ ತಾವು ದೂರವಿರುವುದು ಸಮಯದ ಅಭಾವದ ಮೂಲಕವಲ್ಲವೆಂದೂ ತಾವು ಗೆಲ್ಲಲಸಾಧ್ಯವಾದ ತಮ್ಮ ಉಪೇಕ್ಷೆ ಅಥವಾ ಸೋಮಾರಿತನದ ಸ್ವಭಾವದಿಂದಲೆಂದೂ, ಒಪ್ಪಿಕೊಳ್ಳುವರು. ಅವರಿಗೆ ನಾನು ಹೇಳುವುದೇನೆಂದರೆ, ಅವರು ಪ್ರಾಯಶಃ ತಮ್ಮ ವ್ಯಾಪಾರ-ಉದ್ಯೋಗಗಳಲ್ಲಿ ಉಪೇಕ್ಷೆ-ಆಲಸ್ಯಗಳನ್ನು ತೋರದೆ ಆರ್ಥಿಕ ಲಾಭವು ದೃಷ್ಟಿಯಲ್ಲಿರುವುದರಿಂದ ತಮಗೆ ವೈಯಕ್ತಿಕ ಅನನುಕೂಲತೆಗಳೂ ಬೇನೆ-ಬೇಸರಿಕೆಗಳು ಬಂದರೂ ಪೂರ್ಣ ಉತ್ಸಾಹದಿಂದ ದುಡಿಯುವರು. ಭೌತಿಕಲಾಭದ ಹಂಬಲು ಅವರ ಅನನುಕೂಲತೆಗಳನ್ನೂ ಅಸ್ವಾಸ್ಥ್ಯವನ್ನೂ ಕಡೆಗಣಿಸುವಂತೆ ಮಾಡುವುದು. ಅದರಂತೆಯೆ ಧ್ಯೇಯದ ಸಾಕ್ಷಾತ್ಕಾರಕ್ಕಾಗಿ ನಮ್ಮ ಹಂಬಲು ಹೆಚ್ಚಾಗಿದ್ದರೆ ನಮ್ಮ ಉಪೇಕ್ಷೆ-ಆಲಸ್ಯಗಳು ನಾವು ಮಾಡುವ ಯತ್ನಗಳಲ್ಲಾಗಲಿ ಪ್ರಗತಿಮಾರ್ಗದಲ್ಲಾಗಲಿ ಬಾಧಕವಾಗಲಾರವು. ಪ್ರಾಚೀನ ಮಹರ್ಷಿಗಳ ಜೀವನ ಚರಿತ್ರೆಯನ್ನು ಅವಲೋಕಿಸಿದರೆ, ಸತ್ಯ-ಸಾಕ್ಷಾತ್ಕಾರಕ್ಕಾಗಿ ಅವರು ತಮ್ಮ ಎಲ್ಲ ಸುಖಗಳನ್ನು ತ್ಯಾಗ ಮಾಡಿದುದು ನಮಗೆ ಕಂಡುಬರುತ್ತದೆ. ತಮಗೆ ಅತ್ಯಂತ ಪ್ರಿಯವಾದ ವಸ್ತುವಿಗಾಗಿ ಪ್ರತಿಯೊಂದು ತರದ ಕಷ್ಟನಷ್ಟವನ್ನನುಭವಿಸುತ್ತ ಕಠಿಣವಾದ ತಪೋಮಯ ಜೀವನವನ್ನು ಕಳೆದರು. ಧ್ಯೇಯಸಾಧನೆಯ ತೀವ್ರ ಲವಲವಿಕೆಯು ಇತರ ವಸ್ತುಗಳ ಬಗ್ಗೆ ಅವರನ್ನು ಕುರುಡರನ್ನಾಗಿ ಮಾಡಿತು; ಮತ್ತು ಅವರು ತಮ್ಮ ಮಾರ್ಗದಲ್ಲಿಯ ತೊಂದರೆಗಳನ್ನೂ ವೈಪರೀತ್ಯಗಳನ್ನೂ ಲೆಕ್ಕಿಸದೆ ಅಚಲರಾಗಿದ್ದರು. ಒಂದು ವಸ್ತುವಿಗಾಗಿ ಈ ತೆರನಾದ ತೀವ್ರ ಲವಲವಿಕೆಯೂ ಧ್ಯೇಯಪ್ರಾಪ್ತಿಗಾಗಿ ದೃಢವಾದ ಸಂಕಲ್ಪವೂ

ಸಂಪೂರ್ಣ ಯಶಸ್ಸನ್ನು ಹೊಂದಲು ತೀರ ಆವಶ್ಯಕ. ಗೃಹಸ್ಥಜೀವನದ ಎಲ್ಲ ಕಷ್ಟ-ಚಿಂತೆಗಳಿಂದ ಆವರಿಸಲ್ಪಟ್ಟು ನೀವು ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೆ ಇರಲಿ, ದೇವರ ಕಡೆಗೆ ನಿಮ್ಮ ಲಕ್ಷ್ಯವನ್ನು ಹೊರಳಿಸಿ ಶ್ರದ್ಧೆ-ವಿಶ್ವಾಸಗಳಿಂದ ಮುಂದುವರಿದುದಾದರೆ, ನೀವು ಅಧ್ಯಾತ್ಮಕ್ಷೇತ್ರದಲ್ಲಿ ಗೆಲವನ್ನು ಪಡೆಯುವಿರೆಂದು ನಾನು ಆಶ್ವಾಸನ ಕೊಡಬಲ್ಲೆ. ನಿಮ್ಮ ಕಾರ್ಯ-ಮಗ್ನ ಜೀವನವು ಆಗ ನಿಮ್ಮ ಮಾರ್ಗದಲ್ಲಿ ಅಡ್ಡಿಯಾಗಲಾರದು. ಸತ್ಯ-ವಸ್ತುವನ್ನು ಪಡೆಯಲು ತಾವು ತೀರ ಅಸಮರ್ಥರೂ ದುರ್ಬಲರೂ ಎಂದು ತಿಳಿದುಕೊಂಡು ಜನರು ಸಾಧಾರಣವಾಗಿ ಸಂದೇಹದಿಂದಲೆ ದೇವರ ಕಡೆಗೆ ಹೋಗುವರು. ಪ್ರಥಮ ಸೋಪಾನದಲ್ಲಿಯೇ ಕೈಕೊಳ್ಳಲಾದ ದೃಢಸಂಕಲ್ಪವನ್ನು ಕೊನೆಯ ವರೆಗೂ ಇರಿಸಿಕೊಂಡರೆ ಪೂರ್ಣಯಶವು ದೊರೆಯದಿರದು. ಮನುಷ್ಯನು ದೃಢವಾದ ಮನಸ್ಸಿನಿಂದ ಈ ಕ್ಷೇತ್ರದಲ್ಲಿ ಕಾಲಿಟ್ಟರೆ ಅರ್ಧ ದಾರಿಯನ್ನು ನಡೆದಂತೆಯೆ. ಕ್ಲೇಶ-ಖಿನ್ನತೆಗಳು ಎವೆಯಿಕ್ಕುವುದರೊಳಗೆ ಕರಗಿಹೋಗಿ ಯಶಸ್ಸಿನ ಮಾರ್ಗವು ಸುಗಮವಾಗುವುದು. ಸಂದಿಗ್ಧ ಮನೋವೃತ್ತಿಯು ಅರೆಮನಸ್ಸಿನ ಪ್ರಯತ್ನಗಳಿಗೆ ಕಾರಣವಾಗಿ ಕೇವಲ ಅಲ್ಪಯಶಸ್ಸಿನಲ್ಲಾಗಲಿ, ಹೆಚ್ಚಾಗಿ ವಿಫಲತೆಯಲ್ಲಾಗಲಿ ಪರಿಣಮಿಸುವುದು. ನಮ್ಮ ದೃಢಸಂಕಲ್ಪವು ಕಾರ್ಯಸಾಧನೆಗಾಗಿ ಅಜ್ಞಾತಮೂಲಗಳಿಂದ ತಾನಾಗಿಯೆ ಶಕ್ತಿಯನ್ನು ಪಡೆದುಕೊಳ್ಳಲು ಶಕ್ಯಗೊಳಿಸುವುದು. ವಸ್ತು-ವನ್ನು ಪಡೆಯಲು ಅನುದಿನವೂ ಅಧಿಕವಾಗುವ ತಳಮಳವಾಗಲಿ, ಆತುರ-ದಿಂದ ಕೂಡಿದ ಸ್ಥಿರಸಂಕಲ್ಪವಾಗಲಿ ನಮ್ಮ ಪ್ರಯತ್ನಗಳ ಬಲವನ್ನು ಹೆಚ್ಚಿಸುವುದರಿಂದ ನಮಗೆ ಅದೇ ಸತ್ಯವಸ್ತುವಿನ ಸತತವಾದ ಸಂಬಂಧ-ವುಳಿದು ನಮ್ಮ ಆಧ್ಯಾತ್ಮಿಕ ಸುಸ್ಥಿತಿ-ಪ್ರಗತಿಗಳಿಗೆ ಸಹಾಯಕವಾಗುವ ಪ್ರತಿ-ಯೊಂದು ಸೂಚನೆಯನ್ನು ನಾವು ಗ್ರಹಿಸುತ್ತ ಹೋಗುತ್ತೇವೆ. ಸಾಧ್ಯವಾ-ದಷ್ಟು ಅಲ್ಪ ಸಮಯದಲ್ಲಿ ಗುರಿಯನ್ನು ಮುಟ್ಟಬೇಕೆಂಬ ತವಕ ಅಥವಾ ಸತತ ಅಸ್ವಸ್ಥತೆಯು ಬಹು ಮುಖ್ಯವಾದ ಅಂಶವಾಗಿದ್ದು ನಮ್ಮ ತೀವ್ರ ಯಶಸ್ಸಿಗೆ ಸಹಾಯಕವಾಗುವುದು. ಶಾಶ್ವತವಾದ ಶಾಂತಿ-ಸಮಾಧಾನಗಳನ್ನು ಕೊಡುವ ಸತ್ಯವಸ್ತುವನ್ನು ಪಡೆಯುವ ವರೆಗೂ ನಾವು ವಿಶ್ರಮಿಸ-ಬಾರದು. ಒಂದು ವಸ್ತುವಿನ ತೀವ್ರ ಬಯಕೆಯು ಸಹಜವಾಗಿಯೆ ಅದರ

ಬಗ್ಗೆ ಅಸ್ವಸ್ಥತೆಯನ್ನುಂಟುಮಾಡುವುದು; ಮತ್ತು ಇಷ್ಟಪದಾರ್ಥವನ್ನು ಪಡೆಯುವ ವರೆಗೂ ನಮಗೆ ಶಾಂತಿಯು ದೊರೆಯುವುದಿಲ್ಲ. ಆದುದರಿಂದ ಅದು ಬಹಳ ಅಗತ್ಯವಾಗಿದ್ದು, ಶಕ್ಯವಿದ್ದ ಸಾಧನಗಳ ಮೂಲಕ ಅದನ್ನು ಬೆಳೆಸಿಕೊಳ್ಳಬೇಕು. ಹೀಗೆ, ನಾವು ಚಿರಶಾಂತಿಯನ್ನು ಪಡೆಯಲು ಆರಂಭ-ದಶೆಯಲ್ಲಿ ಆಂತರಿಕ ಅಶಾಂತಿಯನ್ನೂ ತವಕವನ್ನೂ ಬೆಳೆಸಿಕೊಳ್ಳುವೆವು. ನಾವು ಯಾವುದನ್ನು ತೊಲಗಿಸಬಯಸುತ್ತೇವೆಯೋ ಅದನ್ನೇ ಬೆಳೆಸಿಕೊಳ್ಳಲು ಹೇಳಿದರೆ ಅದು ಆಪಾತತಃ ವಿಚಿತ್ರವಾಗಿ ತೋರಬಹುದು; ಆದರೆ ಶೀಘ್ರ ಯಶಸ್ಸನ್ನು ಪಡೆಯಲು ಅದೊಂದೇ ದಾರಿ. ಈ ರೀತಿಯುಂಟಾದ ಅಶಾಂ-ತಿಯು ತಾತ್ಪೂರ್ತಿಕವಾಗಿದ್ದು ಮನಸ್ಸಿನ ಸಾಮಾನ್ಯ ಅಸ್ವಸ್ಥತೆಗಿಂತ ಬೇರೆ ಗುಣವುಳ್ಳದಾಗಿರುತ್ತದೆ. ಅದು ಸೂಕ್ಷ್ಮತರವೂ ಆನಂದದಾಯಕವೂ ಆಗಿರುತ್ತದೆ. ದೈವೀ ಪ್ರವಾಹವು ನಮ್ಮ ಹೃದಯದೊಳಗೆ ಹರಿದು ಬರು-ವಂತೆ ಅದು ದಾರಿಮಾಡಿಕೊಟ್ಟು ದೇವರರಾಜ್ಯದ ಕಡೆಗಿನ ನಮ್ಮ ಮಾರ್ಗ-ವನ್ನು ಸುಗಮಗೊಳಿಸುವುದು. ಒಬ್ಬ ಮನುಷ್ಯನನ್ನು ನೀವು ನೀರೊಳಗೆ ಮುಳುಗಿಸಿದರೆ ನಿಮ್ಮ ಹಿಡಿತದಿಂದ ಪಾರಾಗಲು ಅವನು ಶಕ್ತಿಮೀರಿ ಪ್ರಯತ್ನಿ-ಸುವನು. ಏಕೆಂದರೆ ನೀರಿನೊಳಗಿಂದ ಕೂಡಲೇ ಹೊರಗೆ ಬರಬೇಕೆಂಬ ಆತುರತೆಯು ಆತನ ಪ್ರಯತ್ನದ ಬಲವನ್ನು ಹೆಚ್ಚಿಸುವುದು; ಹಾಗು ಅವನು ನೀರೊಳಗಿಂದ ಹೊರಗೆ ಬರುವವರೆಗೆ ವಿಶ್ರಮಿಸಲಾರ. ಅದರಂತೆಯೆ ಗುರಿ-ಯನ್ನು ಒಮ್ಮೆಲೆ ಮುಟ್ಟಬೇಕೆಂಬ ಅತಿರೇಕದ ಆತುರವು ಸಾಕ್ಷಾತ್ಕಾರ ಮಾರ್ಗದಲ್ಲಿ ನಮ್ಮ ನಡೆಯನ್ನು ತೀವ್ರಗೊಳಿಸಿ ಅತ್ಯಲ್ಪ ವೇಳೆಯಲ್ಲಿ ಯಶಸ್ಸನ್ನು ಸುಲಭವಾಗಿ ನಿಶ್ಚಿತಗೊಳಿಸುವುದು. ಶೀಘ್ರವಾದ ಯಶಸ್ಸಿಗೆ ಅದೇ ಅತಿಸುಲಭವೂ ಶಕ್ತವೂ ಆದ ಸಾಧನವಾಗಿದೆ. ನನ್ನ ಜೊತೆಗಾರರು, ಅನೇಕ ಸಲ, ಇಂಥ ಅಶಾಂತಿಯನ್ನು ತಮ್ಮಲ್ಲಿ ಉಂಟುಮಾಡಿಕೊಳ್ಳುವ ಬಗೆಯನ್ನು ಕುರಿತು ನನ್ನನ್ನು ಕೇಳಿದ್ದಾರೆ. ಅವರಿಗೆ ನಾನು ಹೇಳುವುದೆಂದರೆ, ಬೇಕಾದ ವಸ್ತುವಿಗಾಗಿ ಬಲವಾದ ಪ್ರೀತಿಯು ಅವರನ್ನು ತಾನಾಗಿಯೆ ಅದ-ರೆಡೆಗೆ ಒಯ್ಯುವುದು. ನಾವು ಯಾವುದಾದರೊಂದು ವಸ್ತುವನ್ನು ಆಳವಾಗಿ ಪ್ರೀತಿಸಿದ್ದರೆ ಆ ವಸ್ತುವಿನ ಸನ್ನಿಧಿಯು ಪ್ರಾಪ್ತವಾಗುವ ವರೆಗೆ ಸ್ವಾಭಾವಿಕ ವಾಗಿಯೆ ತವಕ ಪಡುತ್ತೇವೆ. ಯಾವುದಾದರೊಂದು ಪ್ರಾಪಂಚಿಕ ವಸ್ತು-

ವನ್ನು ಹೆಚ್ಚಾಗಿ ಪ್ರೀತಿಸಿದರೆ ಮತ್ತೆ ಮತ್ತೆ ಅದರ ವಿಚಾರವೇ ನಮ್ಮ ಮನಸ್ಸಿನಲ್ಲಿ ಸುಳಿದು ನಾವು ಅದನ್ನೇ ಕುರಿತು ಪುನಃ ಪುನಃ ಆಲೋಚಿಸುತ್ತೇವೆ. ದೈವೀಪ್ರೇಮವನ್ನು ನಮ್ಮ ಹೃದಯದಲ್ಲಿ ಬೆಳೆಸಿಕೊಳ್ಳಬೇಕಾದರೆ ಈ ಕ್ರಮವನ್ನು ವಿಪರ್ಯಸ್ತಗೊಳಿಸಬೇಕು. ನಾವು ದಿನದಲ್ಲಿ ಬಹು ವೇಳೆ ದೇವರನ್ನು ಬಾರಿಬಾರಿಗೆ ಸ್ಮರಿಸಿದರೆ ಆತನಲ್ಲಿ ತಾನಾಗಿಯೆ ನಮ್ಮ ಪ್ರೇಮವು ಬೆಳೆದು, ಅದನ್ನು ಮನಃಪೂರ್ವಕ ಮುಂದುವರಿಸಿದರೆ ಆತನೊಂದಿಗೆ ತೀವ್ರ ಕೂಡಿಕೊಳ್ಳುವ ಹಂಬಲವುಂಟಾಗುವುದು. ದೇವರೊಂದಿಗೆ ಪ್ರೇಮವನ್ನು ಬೆಳೆಸುವ ಇನ್ನೊಂದು ರೀತಿಯೆಂದರೆ, ನಾಟಕದಲ್ಲಿ ಅಭಿನಯಿಸುವಂತೆ 'ಪ್ರೇಮಿ' ಯ ಪಾತ್ರವನ್ನು ಧರಿಸುವುದು ಆದರದು ಸೂಕ್ಷ್ಮ ಸಾಧನಗಳನ್ನನುಸರಿಸಲು ಬಹುಮಟ್ಟಿಗೆ ಅಸಮರ್ಥರಾದವರಿಗೆ ಮಾತ್ರ. ಈ ಸಾಧನವು ಕೃತಕವಾದರೂ ನಿಮ್ಮನ್ನು ಬಲು ಬೇಗ ಸತ್ಯದ ಕಡೆಗೆ ಒಯ್ಯುವುದು; ಹಾಗು ನಿಜವಾದ ಪ್ರೇಮಭಾವನೆಗಳೂ ಆತುರತೆಯೂ ನಿಮ್ಮ ಹೃದಯವನ್ನು ತಳಮಳಗೊಳಿಸಲಾರಂಭಿಸುವುವು.

ಸಾಕ್ಷಾತ್ಕಾರದಲ್ಲಿ ಬಹು ಮುಖ್ಯವಾದ ಅಂಶವೆಂದರೆ, ಯಶಸ್ಸನ್ನು ಗಳಿಸುವುದರಲ್ಲಿ ನಮ್ಮ ಶಕ್ತಿ–ಸಾಮರ್ಥ್ಯಗಳ ಬಗ್ಗೆ ಆತ್ಮವಿಶ್ವಾಸ. ಪ್ರಾಚೀನ ಮಹರ್ಷಿಗಳು ಸಹ ಪಡೆಯಲಾರದ ಪೂರ್ಣತೆಯ ಅತ್ಯುಚ್ಚ ಸ್ಥಿತಿಯನ್ನು ಹೊಂದಲು ನಾವು ಅಯೋಗ್ಯರೆಂದಾಗಲಿ ಅಶಕ್ತರೆಂದಾಗಲಿ ಒಂದು ಕ್ಷಣಕಾಲವಾದರೂ ವಿಚಾರ ಮಾಡುವುದು ಹುಚ್ಚುತನವಾಗಿದೆ. ನಾವು ಸಾಕ್ಷಾತ್ಕಾರದ ಮಾರ್ಗದಲ್ಲಿ ಧೀರಯೋಧನಂತೆ ಅಡೆತಡೆಗಳನ್ನು ಲೆಕ್ಕಿಸದೆ ಪೂರ್ಣ ವಿಶ್ವಾಸ–ಶ್ರದ್ಧೆಗಳಿಂದ ಮುನ್ನಡೆಯಬೇಕು. ಖಿನ್ನತೆ–ನಿರಾಶೆಗಳು ನಮ್ಮ ಸಂಕಲ್ಪವನ್ನು ದುರ್ಬಲಗೊಳಿಸಿ ದೃಢತೆಯನ್ನು ನಾಶಗೊಳಿಸುತ್ತವೆ. ನಾವು ಆತಂಕಗಳನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ನಿರಾಶೆಗೆ ಎಡೆಗೊಡಬಾರದು. ನಿರಾಶೆಯು ಬಹುದೊಡ್ಡ ದೋಷವೂ ಅಧ್ಯಾತ್ಮಜೀವನಕ್ಕೆ ಬಲು ಘಾತಕವಾದ ವಿಷವೂ ಆಗಿದೆ.

ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದ ಮನುಷ್ಯನನ್ನು ಸರಿಯಾಗಿ ರೂಪಿಸುವ ಒಂದು ಆವಶ್ಯಕ ಅಂಶವೆಂದರೆ ಮಿತತ್ವ. ಈ ಶಬ್ದವು ಬಹು ವ್ಯಾಪಕವಾಗಿದ್ದು ಮನುಷ್ಯನ ಚಟುವಟಿಕೆಗಳ ಪ್ರತಿಯೊಂದು ಹಂತವನ್ನೂ

ಒಳಗೊಳ್ಳುತ್ತದೆ. ಮಿತತ್ವವೆಂದರೆ ಎಲ್ಲ ಇಂದ್ರಿಯ–ಸಂವೇದನೆಗಳಲ್ಲಿ ಹಾಗು ಶಕ್ತಿಗಳಲ್ಲಿ ಸಮತ್ವವನ್ನು ಕಾಪಾಡಿಕೊಂಡು ಹೋಗುವುದು; ಹೆಚ್ಚು-ಕಡಮೆಗಳಿಲ್ಲದಂತೆ ಆಯಾ ಕಾರ್ಯಗಳಿಗೆ ಆಯಾ ಸಮಯದಲ್ಲಿ ಸ್ವಾಭಾ-ವಿಕವಾಗಿ ಬೇಕಾದಷ್ಟನ್ನೇ ಮನಸ್ಸಿನ ಮೇಲೆ ಸ್ವಲವೂ ಪರಿಣಾಮ ಮಾಡಿ-ಕೊಳ್ಳದೆ ಉಪಯೋಗಿಸುವುದು. ಇಂದು ಸಾಮಾನ್ಯವಾಗಿ ಎಲ್ಲ ಸಂಗತಿ ಗಳಲ್ಲಿಯೂ ಸಮತ್ವವು ಭಂಗವಾದುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ, ನಮ್ಮ ದೃಷ್ಟಿಗೆ ಬೀಳುವ ಪದಾರ್ಥಗಳಿಗೆಲ್ಲ ನಾವು ಸಲ್ಲದ ಮಹತ್ತ್ವವನ್ನು ಕೊಟ್ಟು ನಮ್ಮ ವಿಚಾರಶಕ್ತಿಯಿಂದ ಅದನ್ನು ಬಲಪಡಿಸು-ತ್ತೇವೆ. ತತ್ಪರಿಣಾಮವಾಗಿ ಎಲ್ಲಕ್ಕಿಂತಲೂ ಅದರ ಮಹತ್ತ್ವವು ಹೆಚ್ಚುತ್ತ ಹೋಗುವುದು. ಈ ರೂಢಿಯನ್ನೇ ನಾವು ಬೆಳೆಸಿಕೊಂಡು ಅದನ್ನು ಬೇರೆ ಬೇರೆ ವಸ್ತುಗಳಿಗೆ ಹೆಚ್ಚುಕಡಮೆ ಪ್ರಮಾಣದಲ್ಲಿ ಅನ್ವಯಿಸುತ್ತೇವೆ. ಫಲ-ಸ್ವರೂಪವಾಗಿ ಅಶಾಂತಿ ಮತ್ತು ಮಾನಸಿಕ ಹೋರಾಟಗಳಲ್ಲದೆ ಬೇರೇನೂ ಉಂಟಾಗುವುದಿಲ್ಲ. ನಮ್ಮ ಎಲ್ಲ ದುಃಖ–ತೊಂದರೆಗಳಿಗೂ ಇದೇ ಮೂಲ ಕಾರಣ. ಪೂರ್ಣ ಮಿತತ್ವ ಮತ್ತು ಸಮತೆಗಳು ಮತ್ತೆ ಸ್ಥಾಪಿತವಾಗುವ ವರೆಗೆ ಸಾಕ್ಷಾತ್ಕಾರವು ಶಕ್ಯವಾಗುವುದಿಲ್ಲ. ಸೃಷ್ಟಿಯ ಆರಂಭದಲ್ಲಿ ಎಲ್ಲವೂ ಪೂರ್ಣಸಮತ್ವದ ಸ್ಥಿತಿಯಲ್ಲಿದ್ದಿತು. ಸತ್ಯವಸ್ತುವಿನ ಆ ಸ್ಥಿತಿಯನ್ನು ಮಿತ-ತ್ವವು ಬಹುಮಟ್ಟಿಗೆ ಹೋಲುತ್ತದೆ. ಕಾಲ ಕಳೆದಂತೆ ಅವನತಿಯು ಆರಂಭ-ವಾಯಿತು. ನಮ್ಮ ಇಂದ್ರಿಯಗಳೂ ಶಕ್ತಿಗಳೂ ಸಮತೆಯನ್ನು ಕಳೆದು ಕೊಂಡು ಎಲ್ಲವೂ ಅವ್ಯವಸ್ಥಿತವಾಯಿತು. ಈಗ ನಾವು ಮಾಡಬೇಕಾದು-ದೆಂದರೆ, ಅವುಗಳಲ್ಲಿ ಮತ್ತೆ ಸಮತೆಯನ್ನು ತರಲು ನಮ್ಮ ಇಂದ್ರಿಯ-ಗಳನ್ನೂ ಶಕ್ತಿಗಳನ್ನೂ ನಿಗ್ರಹಿಸಬೇಕು. ಸಮತೆಯನ್ನು ಬೆಳೆಸಿಕೊಳ್ಳಲು ನಮ್ಮ ಜೀವನದ ಬಾಹ್ಯರೀತಿಗಳ ಕಡೆಗೂ ನಾವು ವಿಶೇಷ ಲಕ್ಷ್ಯಕೊಡ-ಬೇಕು. ಉದಾಹರಣೆಗಾಗಿ, ಮೃದುವಾದ ನಮ್ರವಾದ ಭಾಷೆ, ಸಭ್ಯ ವ್ಯವ-ಹಾರ, ಜೊತೆಗಾರರೊಂದಿಗೆ ಪ್ರೇಮ–ಸಹಾನುಭೂತಿಗಳು, ಹಿರಿಯರಿಗೆ ಗೌರವ, ಪ್ರತೀಕಾರರಹಿತ ಸ್ವಭಾವ, ಮುಂತಾದುವು. ಈ ಅಭ್ಯಾಸಗಳು ನಮ್ಮನ್ನು ರೂಪಿಸುವುದರಲ್ಲಿ ಅತ್ಯಂತ ಸಹಾಯಕಗಳಾಗಿವೆ. ಸಮತೆಯು ನಿಸರ್ಗದ ಗುಣವಿಶೇಷವಾಗಿದೆ. ನಾವು ಪೂರ್ಣ ಸಮತ್ವವನ್ನು ಪಡೆದರೆ

ನಿಸರ್ಗದೊಂದಿಗೆ ಸಾರೂಪ್ಯವನ್ನು ಹೊಂದಿದಂತೆ. ಇದೇ ಅಧ್ಯಾತ್ಮದ ಸಾರಸರ್ವಸ್ವ.

ಕೊನೆಯದಾಗಿ, ಯಶಸ್ಸಿನ ಅತಿಮಹತ್ತ್ವವಾದ ಹಾಗು ಅಮೋಘವಾದ ಉಪಾಯವೆಂದರೆ ಪ್ರಾರ್ಥನೆ. ಯಾರನ್ನು ನಾವು ಪ್ರೇಮ–ಭಕ್ತಿಗಳಿಂದ ಶರಣುಹೋಗುವೆವೋ ಆ ಭಗವಂತನೊಂದಿಗೆ ಪ್ರಾರ್ಥನೆಯು ನಮ್ಮ ಸಂಬಂಧವನ್ನು ಬೆಳೆಸುವುದು. ಪ್ರಾರ್ಥನೆಯಲ್ಲಿ ನಾವು ದೇವರ ಸಮ್ಮುಖದಲ್ಲಿ ದೀನ ಯಾಚಕರಾಗಿ ನಿಂತು ನಮ್ಮ ನಿಜಸ್ಥಿತಿಯನ್ನು ಆತನೆದುರಿಗಿಟ್ಟು ನಮ್ಮನ್ನು ಪೂರ್ಣವಾಗಿ ಆತನ ಇಚ್ಛೆಗೆ ಒಪ್ಪಿಸಿಕೊಂಡು ಬಿಡುವೆವು. ಇದೇ ಪ್ರಾರ್ಥನೆಯ ನಿಜವಾದ ಸ್ವರೂಪವಾಗಿದ್ದು, ನಿಜವಾದ ಭಕ್ತನಂತೆ ನಾವು ಕೂಡ ಒಡೆಯನ ಇಚ್ಛೆಯಿಂದಲೇ ತೃಪ್ತರಾಗಬೇಕು. ತೀರ ಆವಶ್ಯಕ ವಸ್ತುಗಳ ಕೊರತೆಯಿಂದ ಮನಶ್ಶಾಂತಿಯು ಭಂಗವಾಗುವಂಥ ಅಪವಾದಾತ್ಮಕ ಪ್ರಸಂಗಗಳ ಹೊರತು ಉಳಿದ ಸಮಯದಲ್ಲಿ ಕ್ಷುದ್ರವಾದ ಪ್ರಾಪಂಚಿಕ ಪ್ರಯೋಜನಗಳಿಗಾಗಿ ದೇವರನ್ನು ಪ್ರಾರ್ಥಿಸುವುದು ತಿಳಿಗೇಡಿತನವಾಗಿದೆ. ಸರ್ವಜ್ಞನೂ ಸರ್ವಶಕ್ತನೂ ಆದ ಪರಮಗುರುವನ್ನೇ ನಾವು ಯಾವಾಗಲೂ ಪ್ರೇಮ–ಶರಣಾಗತಿಗಳಲ್ಲಿ ಲೀನವಾದ ಮನಸ್ಸಿನಿಂದ ನಮ್ಮನ್ನು ಸಹ ಮರೆತು ಪ್ರಾರ್ಥಿಸಬೇಕು. ಇದೇ ಪ್ರಾರ್ಥನೆಮಾಡುವ ಸರಿಯಾದ ವಿಧಾನವಾಗಿದ್ದು ಇಂತಹ ಸ್ಥಿತಿಯಲ್ಲಿ ಅದು ಫಲಕಾರಿಯಾಗದಿರುವುದೇ ಅಪರೂಪ. ಈ ವಿಷಯವನ್ನು ಕುರಿತು ನನ್ನ 'ಸಹಜಮಾರ್ಗದ ಹತ್ತು ನಿಯಮಗಳ ವ್ಯಾಖ್ಯಾನ' (Commentary on Ten Commandments of Sahaj Marga) ವೆಂಬ ಪುಸ್ತಕದಲ್ಲಿ ಹೆಚ್ಚು ವಿವರವಾಗಿ ಬರೆದಿದ್ದೇನೆ.

ಕೊನೆಯದಾಗಿ, ಗುರಿಯನ್ನು ಸಾಧಿಸಲು ಅನೇಕ ಮಾರ್ಗಗಳೂ ಸಾಧನಪದ್ಧತಿಗಳೂ ಇವೆಯೆಂಬುದನ್ನೂ ನಿಮಗೆ ಮನಗಾಣಿಸಬಯಸುತ್ತೇನೆ. ಅವು ಸಾಕ್ಷಾತ್ಕಾರದ ಮಾರ್ಗದಲ್ಲಿ ಸ್ವಲ್ಪ ದೂರ ನಡೆಸಬಹುದು; ಆದರೆ ಎಷ್ಟು ದೂರ ಎಂಬುದನ್ನು ನಾನಿಲ್ಲಿ ಚರ್ಚಿಸಬಯಸುವುದಿಲ್ಲ. ಅದನ್ನು ಓದುಗರ ಸ್ವಾನುಭವ ಮತ್ತು ನಿರ್ಣಯಗಳಿಗಾಗಿ ಬಿಟ್ಟುಬಿಡುತ್ತೇನೆ. ಆದರೆ ಇಷ್ಟು ಮಾತ್ರ ಖಚಿತವಾಗಿ ಭರವಸೆ ಕೊಡಬಲ್ಲೆ: ರಾಜಯೋಗವೊಂದೇ ನಿಮ್ಮನ್ನು ಚರಮಗುರಿಯುತ್ತ, ಅಥವಾ ಯಾವುದನ್ನು ಮುಟ್ಟಿ ನೀವು

ನಿಮ್ಮ ಕೇವಲ ಶುದ್ಧಸ್ವರೂಪವನ್ನು ಹೊಂದಿ ನಿಸರ್ಗದೊಂದಿಗೆ ಪೂರ್ಣ ಸಮರಸವಾಗುವಿರೋ ಅಂಥ ಮಾನವನ ಅತ್ಯುಚ್ಚನೆಲೆಯ ಕಡೆಗೆ ಕರ ದೊಯ್ಯಬಲ್ಲುದು. ಇಂಥ ಪರಿಣಾಮವನ್ನು ಇತರ ಯಾವ ವಿಧಿ–ವಿಧಾನ ಗಳೂ ತರಲಾರವು. ಆದುದರಿಂದ ನೀವು ಅತ್ಯುಚ್ಚಸ್ಥಾನವನ್ನು ನಿಮ್ಮ ಗುರಿಯನ್ನಾಗಿಟ್ಟುಕೊಂಡಲ್ಲಿ ಈ ಶಾಸ್ತ್ರವನ್ನನುಸರಿಸುವುದು ಅಗತ್ಯವಾಗಿದೆ. ನಿಜವಾಗಿಯೂ ಯೋಗ್ಯನಾದ ಮಾರ್ಗದರ್ಶಿಯ ಸಹಾಯ-ಆಶ್ರಯಗಳಂತೂ ಆವಶ್ಯಕವಾದ ಹಾಗು ಇಂದಿನ ಕಾಲದಲ್ಲಿ ಬಹು ಕಠಿಣ ಸಮಸ್ಯೆಯೆನಿಸುವ ಸಂಗತಿಗಳಾಗಿವೆ. ಆದರೆ ನಿಜವಾದ ಮುಮುಕ್ಷುವಿಗೆ ಆತನು ದೊರೆಯದೆ ಇರಲಾರನೆಂದು ಭರವಸೆಯನ್ನು ನೀಡಬಲ್ಲೆ.

———

## ಅಧ್ಯಾಯ: ೪

# ಗುರು

ನಮ್ಮ ನಿಶ್ಚಿತ ಗುರಿಯನ್ನೂ ಅದನ್ನು ಪಡೆಯುವ ಯೋಗ್ಯ ಸಾಧನಗಳನ್ನೂ ದೃಷ್ಟಿಯಲ್ಲಿರಿಸಿಕೊಂಡ ಮೇಲೆ ಅನಂತರದ ನಮ್ಮ ಶೋಧವೆಂದರೆ, ಸಾಕ್ಷಾತ್ಕಾರದ ದಾರಿಗುಂಟ ನಮ್ಮನ್ನು ಯಶಸ್ವಿಯಾಗಿ ಕರೆದೊಯ್ಯಬಲ್ಲ ಸರಿಯಾದ ಮಾರ್ಗದರ್ಶಿಯನ್ನು ಹುಡುಕುವುದು. ಎಲ್ಲ ಸಂಗತಿಗಳಲ್ಲಿಯೂ (ಪ್ರಾಪಂಚಿಕ ವಿಷಯಗಳನ್ನೊಳಗೊಂಡು) ನಮಗೆ ಸಮರ್ಥಮಾರ್ಗದರ್ಶಿಯ ಸಹಾಯದ ಅಗತ್ಯವಿದೆ. ತಕ್ಕಮಟ್ಟಿಗೆ ಜ್ಞಾನವನ್ನು ಸಂಪಾದಿಸಿದ ಮೇಲೆ ಹೇಗಾದರೂ ಸ್ವಪ್ರಯತ್ನದಿಂದ ಮುಂದುವರಿಯಬಹುದು. ಆದರೂ ನಾವು ಗ್ರಂಥಗಳಲ್ಲಿ ಹಾಗು ಬರೆಹಗಳಲ್ಲಿ ಅಡಕವಾದ ಪೂರ್ವಾಚಾರ್ಯರ ಅನುಭವವನ್ನು ಅವಲಂಬಿಸಬೇಕಾಗುವುದು. ಅಧ್ಯಾತ್ಮದಲ್ಲಾದರೋ ಈ ವಿಷಯವು ತಿರುವುಮುರುವಾಗಿದೆ. ನಾವು ಪ್ರಗತಿಯನ್ನು ಹೊಂದುತ್ತ ಉಚ್ಚಸ್ಥಿತಿಯನ್ನು ಪಡೆಯುತ್ತ ಹೋದಂತೆಲ್ಲ ಗುರುವಿನ ಅಗತ್ಯವು ಹೆಚ್ಚುತ್ತ ಹೋಗುವುದು. ಪುಸ್ತಕಗಳು ಈ ವಿಷಯದಲ್ಲಿ ನಮಗೆ ಯಾವ ಪ್ರಯೋಜನಕ್ಕೂ ಬರಲಾರವು. ಪದಾರ್ಥಗಳ ಬಾಹ್ಯಜ್ಞಾನವನ್ನು ಸಂಪಾದಿಸಲೂ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ವಾಕ್ಪಟುತ್ವಪೂರ್ಣವಾದ ಭಾಷಣಗಳನ್ನು ಮಾಡಿ ವಾದದಲ್ಲಿ ಗೆಲ್ಲಲೂ ಅವು ನಮಗೆ ಸಹಾಯಮಾಡಬಹುದಾದರೂ ಅಧ್ಯಾತ್ಮದಲ್ಲಿ ಅವುಗಳ ಮೂಲಕವಾಗಿಯೆ ಪ್ರಾಯೋಗಿಕ ಪ್ರವೇಶವನ್ನು ಪಡೆಯುವುದು ಸಾಧ್ಯವಿಲ್ಲ. ಪುಸ್ತಕೀಯ ಜ್ಞಾನವನ್ನು ಅವಲಂಬಿಸಿದ ಯೋಗಸಾಧನೆಗಳು ಹೆಚ್ಚಾಗಿ ತಪ್ಪುದಾರಿಯನ್ನು ಹಿಡಿಸುವಂಥವೂ ನಮ್ಮ ಆಧ್ಯಾತ್ಮಿಕ ಪ್ರಗತಿಗೆ ಹಾನಿಕರವಾದುವೂ ಆಗಿರುತ್ತವೆ. ಕೇವಲ ಸಮರ್ಥ ಮಾರ್ಗದರ್ಶಿಯ ಸಹಾಯಪರ ಆಶ್ರಯ:ವೊಂದೇ ನಮ್ಮನ್ನು ಗಂತವ್ಯದ ವರೆಗೆ ಒಯ್ಯಬಲ್ಲುದು. ಅಧ್ಯಾತ್ಮವಿಷಯಕವಾಗಿ ಹದಿನೆಂಟು ಪುಸ್ತಕಗಳನ್ನು ಬರೆದ ಪ್ರಖ್ಯಾತ ಪಾರಸಿ ಕವಿಯಾದ ಮೌಲಾನಾ ರೂಮ್ ಸಾಹೇ-

ಬನ ಬಗ್ಗೆ ಒಂದು ಕಥೆಯಿದೆ. ಒನ್ಮೆ ಆತನು ಆಧ್ಯಾತ್ಮಿಕ ಶಿಕ್ಷಣ ಪಡೆಯಲು ಒಬ್ಬ ದೊಡ್ಡ ಸಾಧುವಿನ ಬಳಿಗೆ ಹೋದನು. ಆಗ ಆ ಮಹಾತ್ಮನು, ಪ್ರಾಯೋಗಿಕ ಶಿಕ್ಷಣವನ್ನು ಪಡೆಯಬಯಸಿದರೆ ಕವಿಯು ತಾನು ಬರೆದ ಎಲ್ಲ ಪುಸ್ತಕಗಳನ್ನೂ ಹೊಳೆಯಲ್ಲಿ ಬಿಸುಟಬೇಕೆಂಬುದಾಗಿ ಹೇಳಿದನು. ಆದರೆ ಇದರಿಂದ ತನ್ನ ಜೀವಾವಧಿಯ ದುಡಿಮೆಯು ಹಾಳಾಗುತ್ತಿದ್ದುದ-ರಿಂದ ಕವಿಯು ಅದಕ್ಕೆ ಸಮ್ಮತಿಸಲಿಲ್ಲ. ಇದೇ ಪ್ರಾರ್ಥನೆಯೊಂದಿಗೆ ಹಲ-ವಾರು ಬಾರಿ ಸಾಧುವಿನ ಬಳಿಸಾರಿದರೂ ಆತನಿಂದ ಮತ್ತೆ ಅದೇ ಉತ್ತರ ಬರುತ್ತಿದ್ದಿತು. ಕೊನೆಗೆ, ಬೇರೆ ಯಾವ ಉಪಾಯವನ್ನೂ ಕಾಣದೆ ಆತನ ಆಜ್ಞೆಗೊಪ್ಪಿ ತನ್ನ ಎಲ್ಲ ಬರೆಹಗಳನ್ನೂ ನೀರಿನಲ್ಲೆಸೆದು ಆತನ ಶಿಷ್ಯನಾದನು. ನಿಜವಾದ ಸಾಕ್ಷಾತ್ಕಾರವು ಸಾಧನಕ್ಷೇತ್ರದಲ್ಲಿ ತರಬೇತಿ ಹೊಂದುವುದರಿಂದ ಕೈಗೂಡುವುದಲ್ಲದೆ, ಜ್ಞಾನವಾಗಲಿ ಪಾಂಡಿತ್ಯವಾಗಲಿ ಯಾವ ಸಹಾಯ-ವನ್ನೂ ನೀಡಲಾರವು.

ಆದುದರಿಂದ ಆಧ್ಯಾತ್ಮಸಾಧನೆಯಲ್ಲಿ ತೊಡಗಿದವರಿಗೆ ಗುರುವಿನ ಸಹಾಯವು ಅತ್ಯಾವಶ್ಯಕವಾಗಿದೆ. ನೇರವಾಗಿ ಭಗವಂತನನ್ನೇ ಶರಣು-ಹೊಕ್ಕು ಸ್ವಪ್ರಯತ್ನದಿಂದಲೇ ಪೂರ್ಣತ್ವವನ್ನು ಪಡೆದ ಋಷಿಗಳ ಉದಾ-ಹರಣೆಗಳೂ ಇವೆ. ಆದರೆ ಅವು ಬೆರಳಮೇಲೆಣಿಸುವಷ್ಟು ಮಾತ್ರ. ನಿಜ-ವಾಗಿಯೂ ಈ ದಾರಿಯು ಬಲು ಕಠಿಣವಾಗಿದ್ದು ಅದನ್ನು ವಿಶೇಷವಾಗಿ ದೇವದತ್ತವಾದ ಅಸಾಮಾನ್ಯ ಪ್ರತಿಭೆಯುಳ್ಳವರು ಮಾತ್ರ ಅನುಸರಿಸ-ಬಲ್ಲರು. ಗುರುವು ಮನುಷ್ಯ ಹಾಗು ದೇವರನ್ನು ಕೂಡಿಸುವ ಕೊಂಡಿಯಿ-ದ್ದಂತೆ. ಆತನ ಮೂಲಕವಾಗಿಯೆ ನಾವು ದೇವರನ್ನು ಮುಟ್ಟಬಲ್ಲೆವು. ದಾರಿಯ ತೊಡಕುಗಳಿಂದ ನಮ್ಮನ್ನು ಪಾರುಮಾಡಬಲ್ಲ ಶಕ್ತಿ ಆತನೊಬ್ಬನೇ. ನಮ್ಮ ಆಧ್ಯಾತ್ಮಿಕ ಪಯಣದಲ್ಲಿ (ಆಲಂಕಾರಿಕವಾಗಿ ಕಮಲಗಳೆಂದು ಕರೆಯ ಲಾದ) 'ಚಕ್ರ'ಗಳೆಂಬ ವಿವಿಧ ಘಟ್ಟಗಳನ್ನು ದಾಟಬೇಕಾಗುವುದು. ಅವು ಮಾನವನು ಪರಂಪರೆಯಿಂದ ಪಡೆದ ದೈವೀಶಕ್ತಿಯ ಪ್ರಬಲವಾದ ಕೇಂದ್ರ-ಗಳು. ಮನುಷ್ಯದೇಹದಲ್ಲಿ ಅವು ಬೇರೆಬೇರೆ ಸ್ಥಾನಗಳಲ್ಲಿ ಇರಿಸಲ್ಪಟ್ಟಿವೆ. ಎರಡು ಬಿಂದುಗಳ ನಡುವಿನ ಸ್ಥಾನವು ಅನೇಕ ತೊಡಕಾದ ತಂತುಗಳಿಂದ ಹೆಣೆಯಲ್ಪಟ್ಟ ಜಾಳಿಗೆಯಂತಿದೆ. ನಾವು ಮುಂದುವರಿದಂತೆಲ್ಲ ನಡುವಿರುವ

ಈ ಪದರುಗಳ ಗ್ರಂಥಿಗಳನ್ನು ದಾಟಬೇಕಾಗುವುದು. ಭೋಗವನ್ನು ಪೂರ್ಣ-ಗೊಳಿಸಲು ನಾವು ಅಲ್ಲಿ ಸಾಕಷ್ಟು ಕಾಲ ನಿಲ್ಲಬೇಕಾಗುವುದು. ಭೋಗ ವೆಂದರೆ ನಾವು ಹಿಂದೆ ಮಾಡಿದ ಕರ್ಮಫಲಗಳನ್ನು ಅನುಭೋಗಿಸುವುದಷ್ಟೇ ಅಲ್ಲ; ವಸ್ತುತಃ ಅದರರ್ಥವು, ನಾವು ಮುಟ್ಟಿರುವ ಸ್ಥಾನದ ತೊಡಕುಗಳನ್ನು ಬಿಡಿಸುವ ಅವಸ್ಥೆಯೊಳಗಿಂದ ಹಾಯ್ದು ಹೋಗುವುದು. ಎಷ್ಟೋ ವೇಳೆ, ಭೋಗಕ್ಕಾಗಿ ಈ ಸ್ಥಾನಗಳಲ್ಲಿಯ ನಮ್ಮ ವಾಸ್ತವ್ಯವು ಸುದೀರ್ಘವಾಗಿರು-ವುದಲ್ಲದೆ ಅನೇಕ ಸಂಗತಿಗಳಲ್ಲಿ, ಕೇವಲ ಸ್ವಪ್ರಯತ್ನದಿಂದಲೇ ಅಲ್ಲಿಂದ ಹೊರಬರುವುದು ಅಸಾಧ್ಯವಾಗುವುದು. ಪ್ರಾರಂಭದ ಕೆಲವು ಅವಸ್ಥೆಗಳಲ್ಲಿ ಅದು ಸಾಧ್ಯವಾದರೂ ಅನಂತರ ಅಶಕ್ಯವಾಗುವುದು. ಸ್ವಸಾಮರ್ಥ್ಯ-ದಿಂದಲೇ ಪ್ರಯತ್ನಮಾಡಿದ ಅನೇಕ ಪ್ರಾಚೀನ ಋಷಿಗಳು ಮೊದಲನೆಯ ಅಥವಾ ಎರಡನೆಯ ಮಜಲಿನಲ್ಲಿಯೆ ಯಾವಜ್ಜೀವನವೂ ಸುತ್ತಾಡಿ ಅದನ್ನು ದಾಟಲು ಶಕ್ತರಾಗದಿದ್ದುದು ಕಂಡುಬಂದಿದೆ. ವಾಸ್ತವಾಂಶವೇನೆಂದರೆ, ಸ್ವಲ್ಪ ಮುಂದುವರಿದ ಅವಸ್ಥೆಗಳಲ್ಲಿ 'ಜಾರುವ ಸ್ಥಿತಿ'ಯೆನ್ನಿಸಿಕೊಳ್ಳುವ ಸ್ಥಳ ವನ್ನು ಎದುರಿಸಬೇಕಾವುದು. ಅಲ್ಲಿ ನಾವು ಕೆಲವುವೇಳೆ ಸ್ವಲ್ಪ ಮೇಲಕ್ಕೆ ಹೋಗಬಹುದಾದರೂ ಮತ್ತೆ ಬಲು ತೀವ್ರ ಕೆಳಕ್ಕೆ ಜಾರುವೆವು. ಮತ್ತೆ ಮತ್ತೆ ಹೀಗಾಗುವುದರ ಪರಿಣಾಮವಾಗಿ ಆರೋಹಣವು ಕಷ್ಟಕರವಾಗಿ ಬಹು ಮಟ್ಟಿಗೆ ಅಸಾಧ್ಯವೇ ಆಗುವುದು. ಇಂಥ ಪರಿಸ್ಥಿತಿಯಲ್ಲಿ ಯೋಗ್ಯ ಗುರುವು ನಮ್ಮನ್ನು ಬಲವಾಗಿ ಮುಂದಕ್ಕೆ ನೂಕಿದಾಗಲೇ ನಾವು ಈ ಸುಳಿಯಿಂದ ಹೊರಗೆ ಬರುವೆವು. ಗುರುವು ಶಕ್ತಿಸಾಮರ್ಥ್ಯಗಳಲ್ಲಿ ಕಡಮೆಯಿಲ್ಲದಿದ್ದರೆ ಶಿಷ್ಯನನ್ನು ತನ್ನ ಶಕ್ತಿಯ ಮೂಲಕ ಈ ಬಲೆಯಿಂದ ಮೇಲಕ್ಕೆ ನೂಕಿ ಮುಂದಿನ ಮಜ-ಲಿಗೆ ಒಯ್ಯುವನು. ಆದುದರಿಂದ, ನಾವು ಆರಿಸಿಕೊಳ್ಳುವ ಮಾರ್ಗದರ್ಶಿಯು ಅತ್ಯುನ್ನತ ಮಟ್ಟದವನಿರುವುದು ಅಗತ್ಯವಾಗಿದ್ದು ತನ್ನಲ್ಲಿದ್ದ ಅಲೌಕಿಕ ಸಾಮರ್ಥ್ಯದ ಮೂಲಕ ಕಟಾಕ್ಷಮಾತ್ರದಿಂದ ತೊಡಕುಗಳನ್ನು ಕತ್ತರಿಸುವ ಕಾರ್ಯದಲ್ಲಿ ದಕ್ಷನಿರಬೇಕು. ಪೂರ್ಣತೆಯನ್ನಾಗಲಿ ಸಂಪೂರ್ಣ ಆತ್ಮ-ನಿರಸನವನ್ನಾಗಲಿ ಹೊಂದಿದವನೇ ಅಂಥವನಾಗಬಲ್ಲನು. ಕಾರಣ, ನಾವು ಇಂಥ ದೊಡ್ಡ ಶಕ್ತಿಯೊಂದಿಗೆ ಆಕರ್ಷಣೆ ಮತ್ತು ಪ್ರೇಮಭಾವನೆಗಳಿಂದ ನಮ್ಮ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕು. ಆತನನ್ನು ಕುರಿತು ನಮ್ಮ

ಮನಸ್ಸಿನಲ್ಲಿ ನಾವು ಯಾವ ಭಾವನೆಯನ್ನು ತಾಳಿರುವೆವೆಂಬುದು ಅಷ್ಟು ಮುಖ್ಯವಲ್ಲ. ನಮ್ಮ ಗೆಳೆಯನೆಂದೋ, ಗುರುವೆಂದೋ, ಸೇವಕನೆಂದೋ ಅಥವಾ ನಮಗೆ ಇಷ್ಟವಾದ ಇನ್ನಾವುದಾದರೂ ರೀತಿಯಿಂದ ಆತನನ್ನು ನಾವು ಕರೆಯಬಹುದು. ಆದರೆ ಯಾವ ಸ್ಥಿತಿಯಲ್ಲಿಯೂ ಆತನು ಸಾಮಾನ್ಯವಾಗಿ ಕರೆಯಲಾಗುವಂತೆ, ನಮ್ಮ ಮಾರ್ಗದರ್ಶಿಯಾಗಿ ಅಥವಾ ಗುರುವಾಗಿಯೆ ಉಳಿಯುವನು.

ಪ್ರತಿಯೊಬ್ಬ ಧಾರ್ಮಿಕ ಹಿಂದುವೂ ತನ್ನ ಆಧ್ಯಾತ್ಮಿಕ ಲಾಭದ ಲವಲವಿಕೆಯನ್ನು ತಣಿಸಲು ಗುರುವನ್ನಾಶ್ರಯಿಸುವುದು ಅಗತ್ಯವೆಂದು ತಿಳಿದರೂ ದುರ್ದೈವದಿಂದ ಈಗಿನ ಕಾಲದಲ್ಲಿ ಯೋಗ್ಯ ಮಾರ್ಗದರ್ಶಿಯನ್ನಾರಿಸಿಕೊಳ್ಳುವ ವಿಷಯದಲ್ಲಿ ಬಹಳ ದುರ್ಲಕ್ಷ್ಯ ಮಾಡಲಾಗುತ್ತಿದೆ. ಸಾಮಾನ್ಯವಾಗಿ ಜನರು ಈ ಕಾರ್ಯಕ್ಕಾಗಿ ಯಾರು ಬೇಕಾದವರನ್ನು– ಅವರ ಯೋಗ್ಯತೆ, ಸಾಮರ್ಥ್ಯಗಳ ಕಡೆಗೆ ಲಕ್ಷ್ಯಕೊಡದೆ–ಆರಿಸಿಕೊಳ್ಳುವರು. ಅಜ್ಞಜನತೆಯನ್ನಾಕರ್ಷಿಸಲು ಈ ಗುರುಃಗಳೆನ್ನಿಸಿಕೊಳ್ಳುವವರು ತೋರಿಸುವ ಚಮತ್ಕಾರಗಳಿಂದಾಗಲಿ ಅನ್ಯರ ಪ್ರೋತ್ಸಾಹನದಿಂದಾಗಲಿ ಹೀಗೆ ಮಾಡಲು ಪುಸಲಾಯಿಸಲ್ಪಡುವರು. ಶಿಷ್ಯರನ್ನೇ ಬೇಟೆಯಾಡುತ್ತಿರುವ ಗುರುಗಳ ಕೊರತೆಯಿಲ್ಲ. ಗಿಡಗಳ ಎಲೆಗಳಷ್ಟೇ ಅವರು ಅಸಂಖ್ಯರಾಗಿದ್ದಾರೆ; ಏಕೆಂದರೆ 'ಗುರುತ್ವ'ವು ಅವರಲ್ಲನೇಕರಿಗೆ ಲಾಭದಾಯಕವಾದ ಉದ್ಯೋಗವಾಗಿದ್ದು ಬೇರೆ ಯಾವ ರೀತಿಯಿಂದಲೂ ಗಳಿಸಲಶಕ್ಯವಾದ ಹೇರಳ ಆದಾಯ ವನ್ನು ದೊರಕಿಸಿಕೊಡುತ್ತದೆ. ಅಲ್ಲದೆ ಅವರು ತಮ್ಮ ಶಿಷ್ಯರಿಂದ ಘನವಾದ ಗೌರವವನ್ನೂ ವೈಯಕ್ತಿಕ ಸೇವೆಯನ್ನೂ ಪಡೆಯುವರು. ಅಜ್ಞಜನರು, ಹೀಗೆ, ಆತ್ಮಪ್ರತಿಷ್ಠೆಯನ್ನು ಮೆರೆಯುವ ಈ ಕಸಬುದಾರರಿಗೆ ಬಲು ತೀವ್ರ ಬಲಿಯಾಗುತ್ತಾರೆ. ಒಂದು ಸಣ್ಣ ಚಮತ್ಕಾರವಾಗಲಿ, ಯಾವುದಾದರೊಂದು ಸುಂದರವಾದ ಸಾಮಾನ್ಯ ಆಕರ್ಷಣವಾಗಲಿ ನೂರಾರು ತಿಳಿಗೇಡಿ ಕುರಿಗಳನ್ನು ಅವರ ಗುರುತ್ವದ ಮುಂದೆಗೆ ಎಳೆದು ತರಲು ಸಾಕಾಗುತ್ತದೆ. ಅವರನ್ನು ಅಸಂತುಷ್ಟಗೊಳಿಸಿದವನಿಗೆ ಶಾಪ ಕೊಡುವ ಬೆದರಿಕೆಯು ಸಾವಿರಾರು ಜನರನ್ನು ಅವರ ಅಂಕಿತದಲ್ಲಿ ತರಬಹುದು. ಇಷ್ಟೇ ಅಲ್ಲ, ತಮ್ಮ ಕಸಬಿನ ಗುತ್ತಿಗೆಯನ್ನು ಭದ್ರಪಡಿಸಿಕೊಳ್ಳಲು 'ವಿಶಿಷ್ಟವರ್ಗದವನೇ–

ಗೃಹಸ್ಥನಿರಲಿ, ಸಂನ್ಯಾಸಿಯಿರಲಿ — ಗುರುವಾಗಲು ಅಧಿಕಾರಿ'ಯೆಂದು ಘೋಷಿಸುವರು. ತಮ್ಮ ಶಕ್ತಿ ಅರ್ಹತೆಗಳೇನೇ ಇರಲಿ, ತಾವು ಹುಟ್ಟಿನಿಂದಲೇ ಧರ್ಮದ ಜಗದ್ಗುರುಗಳೆಂದು ಸಾಧಿಸುವರು. ಇಂದಿನ ಕಾಲದಲ್ಲಿ ಸಂನ್ಯಾಸಿಗಳಾದರೂ ನಿಮಗೆ ಬಹುಸಂಖ್ಯೆಯಲ್ಲಿ ದೊರೆಯುವರಲ್ಲದೆ ಅವರಾದರೂ ಮಹಾತ್ಮರೆಂದೂ ಜಗದ್ಗುರುಗಳೆಂದೂ ತೋರಿಸಿಕೊಳ್ಳುವರು. ದೇಶಕ್ಕೂ ಧರ್ಮಕ್ಕೂ ಲಜ್ಜಾಸ್ಪದರಾದ ಇಂಥ ಠಕ್ಕರು ಅಜ್ಞಜನರನ್ನು ಮೋಸಗೊಳಿಸುತ್ತ ಸ್ವಾರ್ಥವನ್ನು ಸಾಧಿಸುತ್ತ ಯಾವ ದಂಡದ ಭಯವೂ ಇಲ್ಲದೆ ತಿರುಗುತ್ತಿರುವುದು ಶೋಚನೀಯವಲ್ಲವೇ ? ಜನತೆಯು, ಇವರು ಮಾಡಿರುವ ಅನರ್ಥದ ಕಡೆಗೆ ಕಣ್ದೆರೆಯುವ ಕಾಲವು ಬಂದಿದೆ. 'ಗುರುತ್ವ'ವು ವಿಶಿಷ್ಟವರ್ಗದ ಗುತ್ತಿಗೆಯೆಂಬುದು ಕೇವಲ ಅಪಹಾಸ್ಯದ ಸಂಗತಿಯಾಗಿದ್ದು, ತಮ್ಮ ವ್ಯಕ್ತಿಗತ ಹಿತಸಂರಕ್ಷಣೆಗಾಗಿ ಕಸಬುದಾರ ಗುರುಗಳಿಂದ ಅದು ಸ್ಥಾಪಿತವಾಗಿದೆ. ಶಿಷ್ಯನು ತನ್ನ ಗುರುವಿನೊಂದಿಗೆ ತನಗಿದ್ದ ಪವಿತ್ರ ಸಂಬಂಧವನ್ನು ಯಾವ ಪರಿಸ್ಥಿತಿಯಲ್ಲಿಯೂ ಕಡಿಯಲಾರನೆಂಬ ಸಾಮಾನ್ಯವಾಗಿ ನಂಬಲಾದ ತತ್ತ್ವವು ಕೂಡ, ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಕಪಟಗುರುಗಳಿಂದ ಅನುಸರಿಸಲಾದ ಕುಟಿಲತಂತ್ರವಾಗಿದ್ದು ಮೋಸವಲ್ಲದೆ ಮತ್ತೇನೂ ಅಲ್ಲ. ಶಿಷ್ಯನಿಗೆ ದೀಕ್ಷೆ ಕೊಡುವ ಪದ್ಧತಿಯು (ಒಳ್ಳೆಯ ತತ್ತ್ವದ ಮೇಲೆ ಸ್ಥಾಪಿತವಾಗಿದ್ದರೂ) ಅದರ ನಿಜವಾದ ಮಹತ್ತ್ವವನ್ನು ತಿಳಿಯದ ಆಧುನಿಕ ಕಸಬುದಾರರಿಂದ ಬಹಳವಾಗಿ ದುರುಪಯೋಗಮಾಡಲ್ಪಟ್ಟಿದೆ. ದೀಕ್ಷೆಯ ವೇಳೆಯಲ್ಲಿ ಶಿಷ್ಯನ ಕಿವಿಯೊಳಗೆ ಕೆಲವು ರಹಸ್ಯಮಯ ಶಬ್ದಗಳನ್ನುಚ್ಚರಿಸುವುದೂ ಹಲವು ಪೂಜಾವಿಧಾನಗಳನ್ನು ಹೇಳಿಕೊಡುವುದೂ—ಇಷ್ಟೇ ಗುರುವಿನ ಕಾರ್ಯವೆಂದು ತಿಳಿದಿರುವರು. ಶಿಷ್ಯನ ಬಗೆಗಿದ್ದ ತಮ್ಮ ಕರ್ತವ್ಯವು ಇಲ್ಲಿಗೆ ಮುಗಿದಂತಾಗಿ, ವರ್ಷಕ್ಕೊಂದು ಸಲ ಅವನಿಗೆ ದರ್ಶನ ಕೊಟ್ಟು ಕಾಣಿಕೆಕೊಳ್ಳುವುದರ ಹೊರತು ಆತನ ಪ್ರಗತಿಗಾಗಿ ಅವರಿಗೆ ಏನೂ ಮಾಡುವುದುಳಿಯುವುದಿಲ್ಲ. ನಿಜವಾಗಿಯೂ ಶಿಷ್ಯನ ಹೃದಯದಲ್ಲಿ ಶ್ರದ್ಧೆಯೂ ಭಗವದ್ಭಕ್ತಿಯೂ ಆಳವಾಗಿ ಬೇರೂರಿದಾಗ ಮಾತ್ರ ಅವನಿಗೆ ವಿಧಿಪೂರ್ವಕವಾಗಿ ದೀಕ್ಷೆಯನ್ನು ಕೊಡಬೇಕು. ಪರಾಶಕ್ತಿಯೊಂದಿಗೆ ಶಿಷ್ಯನ ಸಂಬಂಧವು ಸ್ಥಾಪಿತವಾಯಿತೆಂಬುದನ್ನು ದೀಕ್ಷೆಯು

ಸೂಚಿಸುತ್ತದೆ. ಆ ಸ್ಥಿತಿಯಲ್ಲಿ ಆಧ್ಯಾತ್ಮಿಕ ಶಕ್ತಿಯು, ಶಿಷ್ಯನ ಗ್ರಹಣ-ಶಕ್ತಿಯು ಬೆಳೆದಷ್ಟು ಪ್ರಮಾಣದಲ್ಲಿ, ತನ್ನಷ್ಟಕ್ಕೆ ತಾನೇ ಹರಿದುಬರಲು ಆರಂಭವಾಗುವುದು. ಇನ್ನು, ಗಾಢವಾದ ಸಂಬಂಧವನ್ನು ಸ್ಥಾಪಿಸುವುದು ಗುರುವಿನ ಶಕ್ತಿ–ಸಾಮರ್ಥ್ಯಗಳನ್ನವಲಂಬಿಸಿರುವುದರಿಂದ, ಇದಕ್ಕಾಗಿ ಶ್ರೇಷ್ಠ ದರ್ಜೆಯ ಗುರುವು ಬೇಕು. ಒಮ್ಮೆ ಇಂಥ ಗಾಢವಾದ ಸಂಬಂಧವು ಸ್ಥಾಪಿತವಾಯಿತೆಂದರೆ ಶಿಷ್ಯನು ಮುಕ್ತನಾಗುವ ವರೆಗೂ ಅದು ಮುಂದುವರಿ-ಯುವುದು. ಇಂಥ ಪರಿಸ್ಥಿತಿಯಲ್ಲಿ ಮುಕ್ತಿಯು ಅನೇಕ ಜನ್ಮಗಳ ಅನಂ-ತರ ದೊರೆಯುವ ಸಂಗತಿಯಾಗಿ ಉಳಿಯಲಾರದು. ವಸ್ತುಸ್ಥಿತಿಯೆಂದರೆ, ಉತ್ತಮಕೋಟಿಯ ಗುರುವಿನಿಂದ ಶಿಷ್ಯನು ಮೇಲೆ ಹೇಳಲಾದಂತೆ ನಿಜವಾದ ಅರ್ಥದಲ್ಲಿ ದೀಕ್ಷೆಹೊಂದಿದುದಾದರೆ ಆ ಸಂಬಂಧವನ್ನು ಕಡಿದುಕೊಳ್ಳುವ ಸಂದರ್ಭವೇ ಬರಲಾರದು. ಆದರೆ ಸ್ವಾರ್ಥವನ್ನು ಸಾಧಿಸಲು ದೀಕ್ಷೆಯ ಅಣಕವನ್ನುಮಾಡುವ ಕಸಬುದಾರಗುರುಗಳ ವಿಷಯದಲ್ಲಿ ಮಾತ್ರ ವ್ಯಾಕುಲಪಡಬೇಕಾದುದೇ. ಆದುದರಿಂದ ಶಿಷ್ಯನನ್ನು ಕೊನೆಯ ವರೆಗೂ ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಅವರು, ಗುರುವಿನ ಸಂಬಂಧವನ್ನು ಕಡಿದು ಕೊಳ್ಳುವ ವಿಚಾರವು ಒಮ್ಮೆಯಾದರೂ ಶಿಷ್ಯನ ತಲೆಯಲ್ಲಿ ಸುಳಿದುದಾದರೆ ಆತನು ನರಕಭಾಜನನಾಗುವನೆಂದು ಭಗವದಾದೇಶವಿರುವುದಾಗಿ ಸಾರುವ-ರು. ಅಜ್ಞಜನತೆಯು ಅದನ್ನು ಪರಮಸತ್ಯವೆಂದು ನಂಬಿ ಗುರುವನ್ನು ಅಸಂತೋಷಪಡಿಸುವ ಯಾವುದಾದರೊಂದು ಕಾರ್ಯದ ಆಲೋಚನೆ ಮಾತ್ರದಿಂದ ನಡುಗುವರು. ಆದಕಾರಣ ಗುರುಗಳ ಎಲ್ಲ ಬಗೆಯ ಅತ್ಯಾಚಾರಗಳಿಗೂ ಸ್ವೈರಣೆಯಿಂದ ವಶರಾಗಲು ಯತ್ನಿಸುವರು. ನಮ್ಮ ಶಾಸ್ತ್ರಗಳಲ್ಲಿ ಇಂಥ ಬಗೆಯ ಸೂಚನೆಯು ಕೂಡ ದೊರೆಯಲಿಕ್ಕಿಲ್ಲವೆಂದು ನನಗೆ ವಿಶ್ವಾಸವಿದೆ. ಇದು ಕೇವಲ ಈ ಧರ್ಮಗುರುಗಳ ಚಾತುರ್ಯ ಮಾತ್ರ. ಯಾವನೊಬ್ಬ ಮನುಷ್ಯನಿಗೆ, ಎಂದಾದರೂ ತಾನು ಸರಿಯಾದ ಗುರುವನ್ನು ಆರಿಸಿಕೊಳ್ಳುವುದರಲ್ಲಿ ತಪ್ಪುಮಾಡಿರುವೆನೆಂದು ಎನಿಸಿದ ಪಕ್ಷ ದಲ್ಲಿ ಅಥವಾ ಗುರುವಿನ ಯೋಗ್ಯತೆ–ಸಾಮರ್ಥ್ಯಗಳನ್ನು ಕುರಿತು ತಪ್ಪು ವಿವೇಚನೆ ಮಾಡಿರುವೆನೆಂದು ತಿಳಿದ ಪಕ್ಷದಲ್ಲಿ ಅಂಥ ಪ್ರತಿಯೊಬ್ಬನಿಗೂ ಗುರುವಿನ ಸಂಬಂಧವನ್ನು ಕಡಿದುಕೊಳ್ಳಲು ಜನ್ಮಸಿದ್ಧ ಅಧಿಕಾರವಿದೆಯೆಂದು ನನ್ನ ಮತ. ಇಷ್ಟೇ ಅಲ್ಲ, ತಾನು ದೊರಕಿಸಿಕೊಂಡ ಸ್ಥಿತಿಯಿಂದ ಮುಂದಕ್ಕೆ

ತನ್ನನ್ನು ಕರೆದೊಯ್ಯಲು ಗುರುವಿಗೆ ಸಾಮರ್ಥ್ಯವಿಲ್ಲವೆಂದು ತಿಳಿದು ಬಂದರೆ ಮತ್ತೊಬ್ಬ ಗುರುವನ್ನು ಹುಡುಕಿಕೊಳ್ಳಲು ಆತನು ಸ್ವತಂತ್ರನಾಗಿದ್ದಾನೆ. ಏತದ್ವಿರುದ್ಧ ಪ್ರಾಮಾಣಿಕ ಗುರುವು ತಾನಾಗಿಯೆ, ಶಿಷ್ಯನ ಪ್ರಗತಿಯು ಯಾವ ರೀತಿಯಲ್ಲಿಯೂ ಕುಂಠಿತವಾಗಬಾರದೆಂಬ ದೃಷ್ಟಿಯಿಂದ, ಮುಂದುವರಿದ ಇನ್ನೊಬ್ಬ ಗುರುವನ್ನು ಅರಸಲು ಶಿಷ್ಯನಿಗೆ ಹೇಳಿಕೊಡಬೇಕು. ಇದು ನಿಜವಾಗಿಯೂ ನಿಸ್ವಾರ್ಥಗುರುವಿನ ಪವಿತ್ರ ಕರ್ತವ್ಯವಾಗಿದೆ. ತನ್ನೊಂದಿಗೆ ಸಂಬಂಧವನ್ನು ಕಡಿದುಕೊಳ್ಳುವ ಅನುಜ್ಞೆಯನ್ನು ಗುರುವು ಸ್ವಾರ್ಥದಿಂದ ಪ್ರೇರಿತನಾಗಿ ನಿರಾಕರಿಸಿದುದಾದರೆ ಶಿಷ್ಯನು ಅದನ್ನು ಲಕ್ಷಿಸದೆ ತತ್‌ಕ್ಷಣ ಅವನಿಂದ ದೂರನಾಗಿ ಮತ್ತೊಬ್ಬನನ್ನು ಹುಡುಕಿಕೊಳ್ಳಬೇಕು. ಶಿಷ್ಯನು ಈ ರೀತಿ ಮಾಡಕೂಡದೆಂದು ಯಾವ ಧಾರ್ಮಿಕ ಅಥವಾ ನೈತಿಕ ನಿಯಮವೂ ತಡೆಗಟ್ಟುವುದಿಲ್ಲ.

ಶಾಸ್ತ್ರಗಳ ಇಲ್ಲವೆ ಇತರ ಪವಿತ್ರಗ್ರಂಥಗಳ ಜ್ಞಾನದ ಆಧಾರದ ಮೇಲೆ ಉಪದೇಶಮಾಡುವವರು ಗುರುವರ್ಗದಲ್ಲಿ ಸ್ವಲ್ಪ ಮುಂದುವರಿದವರೆಂದು ಪರಿಗಣಿಸಲಾಗಿದೆ. ಅವರು ಪಂಥಗಳನ್ನೂ ಆಶ್ರಮಗಳನ್ನೂ ಸ್ಥಾಪಿಸಿದ್ದು ಅಲ್ಲಿ ತಮ್ಮ ಅನುಯಾಯಿಗಳ ನಡುವೆ ರಾಜಪದವಿಯನ್ನನುಭವಿಸುವರು. ಆಶ್ರಮಗಳ ಹೊರಗೆ ಹೋಗಿ ದೊಡ್ಡ ದೊಡ್ಡ ಶ್ರೋತೃವರ್ಗಗಳನ್ನುದ್ದೇಶಿಸಿ ಮಾತನಾಡಿ ಕರ್ತವ್ಯಾಕರ್ತವ್ಯಗಳನ್ನು ಹೇಳಿಕೊಡುವರಲ್ಲದೆ, ಮಾಯೆ, ಜೀವ ಮತ್ತು ಬ್ರಹ್ಮ–ಇವುಗಳಿಗೆ ಸಂಬಂಧಿಸಿದ ಪ್ರಮೇಯಗಳ ಬಗ್ಗೆ ತಿಳಿಸುವರು. ಅವರ ಉಪದೇಶವನ್ನು ಕೇಳಲು ಸಾವಿರಾರು ಜನರು ನೆರೆಯುವರಲ್ಲದೆ ಅವರ ಉಚ್ಚವಿಚಾರಗಳನ್ನೂ ವಿಶಾಲವಾದ ಪಾಂಡಿತ್ಯವನ್ನೂ ಹೊಗಳುತ್ತ ಅವರನ್ನು ಮಹಾತ್ಮರೆಂದು ತಿಳಿದುಕೊಳ್ಳುವರು. ತಾವು ಕೇಳಿದ ಅನೇಕ ಜಟಿಲ ಪ್ರಶ್ನೆಗಳಿಗೆ ಅವರು ತಮ್ಮ ಶಾಸ್ತ್ರಗಳ ಜ್ಞಾನಭಾಂಡಾರದಿಂದ ಉತ್ತರಕೊಟ್ಟರೆ ಅವರ ಮಾಹಾತ್ಮ್ಯವು ಜನತೆಯ ಮನದಲ್ಲಿ ಸ್ಥಾಪಿತವಾಗಿ ಅವರನ್ನು ಗುರುಗಳೆಂದು ಸ್ವೀಕರಿಸಲು ಪ್ರೋತ್ಸಾಹಿತರಾಗುವರು. ಆದರೆ ನಿಜವಾಗಿ, ಜನರು ಅವರ ಪಾಂಡಿತ್ಯವನ್ನು ಪರೀಕ್ಷಿಸಿದಂತಾಯಿತೇ ವಿನಾ ಅವರ ನಿಜವಾದ ಯೋಗ್ಯತೆಯನ್ನಲ್ಲ. ಮನುಷ್ಯನನ್ನು ಯೋಗಿಯನ್ನಾಗಲಿ ಸಂತನನ್ನಾಗಲಿ ಮಾಡುವುದು ಕೇವಲ ಸಾಕ್ಷಾತ್ಕಾರವೇ ಹೊರತು ವಿದ್ವತ್ತೆಯುಳ್ಳವನೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ತನ್ನ

ಹೊರಗಣ ಸ್ವರೂಪದಿಂದಾಗಲಿ ಪಾಂಡಿತ್ಯ–ವಾಕ್ಪಟುತ್ವಗಳಿಂದಾಗಲಿ ನಿಮ್ಮನ್ನು ಪ್ರಭಾವಿತಗೊಳಿಸಿದವನ ಆಧ್ಯಾತ್ಮಿಕ ಸಿದ್ಧಿಯು ತೀರ ಕೆಳಮಟ್ಟದ್ದಿರಬಹುದು. ಆದುದರಿಂದ ವಿದ್ವತ್ತೆಯು ನಿಜವಾದ ಮಹಾತ್ಮನ ಇಲ್ಲವೆ ಯೋಗಿಯ ಒರೆಗಲ್ಲಾಗಲಾರದು. ಅದರಂತೆಯೆ ಚಮತ್ಕಾರಗಳಾಗಲಿ ಅಸಾಮಾನ್ಯ ವರ್ತನೆಯಾಗಲಿ ಗುರುವಿನ ನಿಜವಾದ ಪ್ರಮಾಣವಾಗಿರದೆ, ಸಾಕ್ಷಾತ್ಕಾರದ ಮಾರ್ಗದಲ್ಲಿ ಆತನ ಪ್ರಾಯೋಗಿಕ ಸಿದ್ಧಿಗಳೇ ಆತನ ಯೋಗ್ಯತೆಯ ಅಳತೆಗೋಲಾಗಿವೆ. 'ಮಹಾತ್ಮ' ಶಬ್ದಕ್ಕೆ ಕೊಡಲಾಗುವ 'ದೊಡ್ಡ ವ್ಯಕ್ತಿ' ಯೆಂಬ ಸಾಮಾನ್ಯಾರ್ಥವು ನನಗೆ ರುಚಿಸುವುದಿಲ್ಲ. ಮಹಾತ್ಮನೆಂದರೆ ಅತಿ ಕ್ಷುದ್ರ ಅಥವಾ ಹೆಚ್ಚು ಕಡಮೆ ಉಪೇಕ್ಷಿತ ಜೀವಿಯೆಂದೂ ಅಹಂಕಾರ ಇಲ್ಲವೆ ಘನತೆಯ ಎಲ್ಲ ಭಾವನೆಗಳಿಂದ ದೂರನಾದವನೆಂದೂ ಯಾವಾಗಲೂ ಪೂರ್ಣ ಆತ್ಮನಿರಸನದ ಸ್ಥಿತಿಯಲ್ಲಿರುವವನೆಂದೂ ನಾನು ವ್ಯಾಖ್ಯೆ ಮಾಡುವೆನು. ಜ್ಞಾನವು ಸಾಕ್ಷಾತ್ಕಾರದ ಪೂರ್ವಪೀಠಿಕೆಯಾಗಿದ್ದು ಅದು ಅತ್ಯಗತ್ಯವಾಗಿದೆಯೆಂದು ಕೆಲವರು ಅಭಿಪ್ರಾಯಪಡುವರು. ನಾನಿದನ್ನು ಒಪ್ಪುವುದಿಲ್ಲ. ಏಕೆಂದರೆ, ಜ್ಞಾನವು ಬೌದ್ಧಿಕ ಸಿದ್ಧಿಯಾಗಿದ್ದರೆ ಸಾಕ್ಷಾತ್ಕಾರವು ಆತ್ಮದ ಜಾಗ್ರತಿಯಾಗಿದೆ. ಆದುದರಿಂದ ಅದು ಬುದ್ಧಿಯ ವಲಯವನ್ನು ಮೀರುವುದು. ಆಧ್ಯಾತ್ಮಶಾಸ್ತ್ರವಿಷಯಕ ಗ್ರಂಥಗಳಲ್ಲಿ ನಾವು ಬೇರೆ ಬೇರೆ ಆಧ್ಯಾತ್ಮಿಕ ಮಜಲುಗಳಲ್ಲಿ ವರ್ಣಿಸಲಾದ ಮಾನಸಿಕ ಸ್ಥಿತಿಗಳನ್ನು ಕುರಿತು ಓದಿ ತಿಳಿದುಕೊಳ್ಳುವೆವಾದರೂ ಅವುಗಳ ಪ್ರಾಪ್ತಿಯ ವಿಷಯದಲ್ಲಿ ನಾವು ಬಹಳ ದೂರವುಳಿದಿದ್ದೇವೆ. ಆ ಸ್ಥಿತಿಗಳ ಬಗೆಗೆ ನಾವು ಜನರೆದುರು ಮಾತನಾಡಬಹುದು; ಅವುಗಳ ಪರವಾಗಿ ಇಲ್ಲವೆ ವಿರುದ್ಧವಾಗಿ ವಾದಹೂಡಿ ಪಾಂಡಿತ್ಯದಲ್ಲಿ ನಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಬಹುದು. ಆದರೂ ನಾವು ಆಂತರಿಕವಾಗಿ ಆ ಸ್ಥಿತಿಗಳ ಬಗ್ಗೆ ಅಜ್ಞರಾಗಿಯೆ ಇರುವೆವು. ನಾವು ಭಾಷಣಗಳಿಗೆ ಹೋಗಿ ಗೀತೆಯ ಉಪದೇಶವನ್ನು ಕೇಳುವೆವು; ದಿನಾಲು ಬಿಡದೆ ಗೀತೆಯ ಸ್ವಲ್ಪಭಾಗವನ್ನು ಪಠನ ಮಾಡುವೆವು; ಅದರ ಮೇಲೆ ದೊಡ್ಡ ದೊಡ್ಡ ಪಂಡಿತರು ಬರೆದ ಭಾಷ್ಯಗಳನ್ನು ಓದುವೆವು. ಆದರೆ ನಮ್ಮ ಮೇಲೆ ಪ್ರತ್ಯಕ್ಷವಾಗಿ ಅದರಿಂದ ಯಾವ ಪರಿಣಾಮವಾಗಿದೆ? ಅದರಲ್ಲಿ ವರ್ಣಿಸಲಾದ ಸ್ಥಿತಿಗಳಲ್ಲಿ ಒಂದನ್ನಾದರೂ ಪಡೆಯಲು ನಮ್ಮಲ್ಲಿ

ಯಾರಿಗಾದರೂ ಎಂದಾದರೂ ಸಾಧ್ಯವಾಗಿದೆಯೆ ? ಜನರು, 'ಜಗತ್ತು ಮಿಥ್ಯೆ, ಜೀವವು ಬ್ರಹ್ಮ' ಎಂದು ಮುಂತಾಗಿ ಉಚ್ಚರಿಸಬಹುದು; ಆದರೆ ತಾವು ಮಾತನಾಡುವ ಶಬ್ದಗಳ ಬಗ್ಗೆ ಅಂತರ್ಯದಲ್ಲಿ ಅರಿವು ಇರುವುದಿಲ್ಲ. ಶ್ರೀಕೃಷ್ಣನಿಂದ ಉಪದೇಶವನ್ನು ಕೇಳಿದ ಮೇಲೆ ಅರ್ಜುನನು ಅನುಷ್ಠಾನ ಮಾಡಿದಂತೆ ಯಾರಿಗೂ ಗೀತೆಯಲ್ಲಿ ವಿವರಿಸಲಾದ ಸ್ಥಿತಿಗಳನ್ನು ಬೆಳೆಸಿ-ಕೊಳ್ಳಲು ಸಾಧ್ಯವಾಗಿಲ್ಲ. ಗೀತೆಯು ಈಗಿರುವ ರೂಪದಲ್ಲಿ ನಿಜವಾಗಿಯೂ ಭಾರತಯುದ್ಧದ ದಿನ ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶಕ್ಕೆ ವ್ಯಾಖ್ಯಾನವಾಗಿದೆ. ತಾನು ಬಾಯಿಂದ ಮಾತನಾಡಿ ತಿಳಿಸಿದ ಸ್ಥಿತಿಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಸಾಕ್ಷಾತ್ತಾಗಿ ಕರುಣಿಸಿದ್ದನು. ಆದರ ಪರಿ-ಣಾಮವಾಗಿ ಅರ್ಜುನನಿಗೆ ಒಳಗೂ ಹೊರಗೂ ಎಲ್ಲ ಕಡೆಗೂ ಶಬ್ದಶಃ ಆಯಾ ಸ್ಥಿತಿಗಳ ಅನುಭವವಾಯಿತು. ಹೀಗೆ, ಆತನು ಕೇಳಿದ ಪ್ರತಿಯೊಂದು ಶಬ್ದವೂ ಆತನ ಹೃದಯದಲ್ಲಿ ನೇರವಾಗಿ ಪ್ರವೇಶಿಸಿ ಸ್ಥಿರವಾದ ಪರಿಣಾಮ-ವನ್ನುಂಟುಮಾಡಿತು. ಗೀತೆಯ ಆಧುನಿಕ ಉಪದೇಶಕರು ಹಾಗೂ ಪ್ರಚಾರ-ಕರು ಇಷ್ಟಪರಿಣಾಮವನ್ನು ಶ್ರೋತೃಗಳ ಮನಸ್ಸಿನಮೇಲೆ ಮೂಡಿಸಲು ವಿಫಲರಾಗುವ ಕಾರಣವೆಂದರೆ ಆಯಾ ಸ್ಥಿತಿಗಳನ್ನು ಅವರಲ್ಲಿ ಸಂಚರಣ-ಗೊಳಿಸಲು ಅವರಿಗೆ ಸಾಮರ್ಥ್ಯವಿಲ್ಲದಿರುವುದು. ನಿಜವಾಗಿಯೂ, ಗೀತೆ ಯಲ್ಲಿ ಚರ್ಚಿಸಲಾದ ಅನೇಕ ಸ್ಥಿತಿಗಳು, ಮನುಷ್ಯನು ಅಧ್ಯಾತ್ಮಪಥದಲ್ಲಿ ದಾಟುವ ವಿವಿಧ ಹಂತಗಳಾಗಿವೆ. ಅವು ಒಳಗಿನಿಂದ ತಾವಾಗಿಯೆ ಬೆಳೆದು ಬರುತ್ತವೆ. ಯಾವುದಾದರೊಂದು ಮನಃಸ್ಥಿತಿಯನ್ನು ಅಕಾಲದಲ್ಲಿ ಹೊಂದಲು ಕೈಕೊಳ್ಳಲಾಗುವ ನಿಯಮನಿಷ್ಠಸಾಧನವು ನಮ್ಮ ಪ್ರಗತಿಗೆ ಬಾಧಕವಾದ ಆಂತರಿಕ ಜಡತೆಯನ್ನು ಹೆಚ್ಚಿಸುವುದು.

ನಮಗೆ ಧಾರ್ಮಿಕತತ್ತ್ವಗಳ ಸಾಮಂಜಸ್ಯವನ್ನು ತಿಳಿಸುವವನಾಗಲಿ ಕರ್ತವ್ಯಾಕರ್ತವ್ಯಗಳನ್ನು ಹೇಳಿಕೊಡುವವನಾಗಲಿ ನಿಜವಾದ ಗುರುವೆನಿಸ-ಲಾರನು. ಪ್ರಾಯಶಃ ನಮ್ಮಲ್ಲಿ ಪ್ರತಿಯೊಬ್ಬನೂ ಆ ವಿಷಯದಲ್ಲಿ ಸಾಕಷ್ಟು ತಿಳಿದವನಾಗಿದ್ದಾನೆ. ನಾವು ಗುರುವಿನಿಂದ ಅಪೇಕ್ಷಿಸುವ ಸಂಗತಿಯೆಂದರೆ, ನಮ್ಮ ಆತ್ಮದ ಜಾಗೃತಿ ಮತ್ತು ಸಾಕ್ಷಾತ್ಕಾರದ ಮಾರ್ಗದಲ್ಲಿ ಆತನ ನೇರ-ವಾದ ಸಹಾಯ. ನಾವು ಯಶಸ್ಸನ್ನು ಹೊಂದಬೇಕಾಗಿದ್ದರೆ ಇಂಥ ಮನು-

ಷ್ಯನನ್ನೇ ಹುಡುಕಬೇಕು. ಆದುದರಿಂದ ನಾವು ನಮ್ಮ ಆಧ್ಯಾತ್ಮಿಕ ಮಾರ್ಗ-ದರ್ಶಿಯನ್ನು ಪರೀಕ್ಷಿಸುವಾಗ, ಸಾಕ್ಷಾತ್ಕಾರದ ಕ್ಷೇತ್ರದಲ್ಲಿ ಆತನ ಪ್ರಾಯೋಗಿಕ ಸಿದ್ಧಿಯನ್ನು ಗಮನಿಸಬೇಕೇ ಹೊರತು ಪಾಂಡಿತ್ಯ, ಚಮತ್ಕಾರಗಳನ್ನಲ್ಲವೆಂಬುದು ಸ್ಪಷ್ಟವಿದೆ. ಸ್ವತಃ ಮುಕ್ತನಾದವನೇ ನಿಮ್ಮನ್ನು ಶಾಶ್ವತ ಬಂಧನದಿಂದ ಮುಕ್ತಗೊಳಿಸಬಲ್ಲನು. ಸಂಸ್ಕಾರಗಳ, ಮಾಯೆಯ ಅಥವಾ ಅಹಂಕಾರದ ಬಂಧನಗಳಿಂದ ನಿಮ್ಮ ಗುರುವು ಮುಕ್ತನಾಗಿರದಿದ್ದರೆ ಅವುಗಳಿಂದ ನಿಮ್ಮನ್ನು ಮುಕ್ತಗೊಳಿಸಲು ಆತನಿಗೆ ಸಾಧ್ಯವಿಲ್ಲ. ನೀವು ಒಂದು ಕಂಬಕ್ಕೆ ಕಟ್ಟಲ್ಪಟ್ಟಿರುವಿರೆಂದು ಕಲ್ಪಿಸೋಣ. ನಿಮ್ಮ ಗುರುವು ಇನ್ನೊಂದಕ್ಕೆ ಬಂಧಿತನಾದ ಪಕ್ಷದಲ್ಲಿ ಆತನು ನಿಮ್ಮನ್ನು ಬಂಧನದಿಂದ ಬಿಡುಗಡೆಮಾಡುವುದಾದರೂ ಹೇಗೆ? ಸ್ವತಃ ತಾನು ಬಿಡುಗಡೆಹೊಂದಿದ ಮನುಷ್ಯನು ಮಾತ್ರ ನಿಮ್ಮನ್ನು ಬಂಧನದಿಂದ ಬಿಡಿಸಬಲ್ಲನು. ಈ ಕಾರಣದಿಂದಲೇ ಜನರು ಅನೇಕ ಸಂಗತಿಗಳಲ್ಲಿ ದಾರಿತಪ್ಪಿ, ಬಹುಶಃ ಆತ್ಮಪ್ರತಿಷ್ಠೆಯಾಗಲಿ ವೈಯಕ್ತಿಕ ಲಾಭವಾಗಲಿ ಮುಖ್ಯ ಉದ್ದೇಶವಾಗಿ ಉಳ್ಳ ಅಯೋಗ್ಯ ಗುರುಗಳ ಮಾರ್ಗದರ್ಶನಕ್ಕೊಳಗಾಗಿದ್ದಾರೆ. ಮನಸ್ಸಿನಲ್ಲಿ ಇಂಥ ಉದ್ದೇಶವನ್ನಿಟ್ಟುಕೊಂಡು ಅವರು ಸಾಮಾನ್ಯವಾಗಿ ತಮ್ಮ ಸ್ಥಾನಮಾನಗಳನ್ನು ಕಾಯ್ದುಕೊಳ್ಳಲು ಜನರನ್ನು ವಂಚಿಸುವರು. ತಮಗಿಂತಲೂ ಮುಂದುವರಿದ ಅಥವಾ ಹೆಚ್ಚು ಪ್ರಾವೀಣ್ಯವನ್ನು ಪಡೆದ ಮತ್ತೊಬ್ಬರ ಶ್ರೇಷ್ಠತ್ವವನ್ನು ಒಪ್ಪಿಕೊಳ್ಳುವುದೆಂದರೆ ಅವರ ಅಧಿಕಾರ–ಅಭಿಮಾನಗಳಿಗೆ ಬಹುಶಃ ಒಂದು ದೊಡ್ಡ ಆಘಾತವೇ ಸರಿ. ಇದು ಕೆಟ್ಟತರದ ಸ್ಥೂಲ ಅಹಂಕಾರವಲ್ಲದೆ ಮತ್ತೇನೂ ಅಲ್ಲ. ಇಂಥ ಗುರುವನ್ನು ನೀವು ಆಶ್ರಯಿಸಿದರೆ ನಿಮ್ಮಲ್ಲಿಯೂ ಅದೇ ಸ್ಥೂಲತೆಯ ಲಕ್ಷಣವಾದ ಅಹಂಕಾರವು ಬೆಳೆದು ನಿಮ್ಮ ಆಧ್ಯಾತ್ಮಿಕ ಪ್ರಗತಿಯನ್ನು ತಡೆಗಟ್ಟುವುದು. ಈ ಅನಿಷ್ಟವಿರುವ ವರೆಗೆ ಶಾಶ್ವತ ಮುಕ್ತಿಯು ಸಾಧ್ಯವಾಗುವುದಿಲ್ಲ. ವಸ್ತುತಃ ಆಧ್ಯಾತ್ಮಿಕತೆಯು ಮನಸ್ಸಿನ ಅತಿಸೂಕ್ಷ್ಮವಾದ ಸ್ಥಿತಿಯಾಗಿದ್ದು ಉಳಿದುದೆಲ್ಲವೂ ಅದಕ್ಕಿಂತ ಸ್ಥೂಲವಾಗಿಯೆ ಕಾಣುವುದು. ಇಂದ್ರಿಯಗಳಿಗಾಗುವ ಗುಲಾಬಿ ಹೂವಿನ ಸೂಕ್ಷ್ಮಸುಗಂಧದ ಅನುಭವವು ಕೂಡ ಅದರ ಮುಂದೆ ಬಹಳ ಸ್ಥೂಲವೆನಿಸುವುದು. ಪೂರ್ಣ ಸಮಾಧಾನವೂ ಮಿತತ್ವವೂ ಉಳ್ಳ, ಹಾಗು

ನಿಸರ್ಗದೊಂದಿಗೆ ಪೂರ್ಣ ಸಮರಸವಾವ ಸ್ಥಿತಿಯೆಂದು ಅದನ್ನು ಹೇಳಬಹುದು. ಮನಸ್ಸಿನ ಈ ಸ್ಥಿತಿಯಲ್ಲಿ ಎಲ್ಲ ಇಂದ್ರಿಯಗಳೂ ಶಕ್ತಿಗಳೂ ಸುಪ್ತವಾಗಿರುತ್ತವೆ. ಅವುಗಳ ಕಾರ್ಯವು ತಾನಾಗಿಯೆ ನಡೆದು ಮನಸ್ಸಿನ ಮೇಲೆ ಅದರ ಪರಿಣಾಮ ಸ್ವಲ್ಪವೂ ಆಗುವುದಿಲ್ಲ. ಸಂಪೂರ್ಣ ಶಾಂತಿಯು ಮನಸ್ಸಿನ ಉಚ್ಚಸ್ಥಿತಿಗಳಲ್ಲಿ ಒಂದಾಗಿದ್ದರೂ ನಿಜವಾದ ವಸ್ತುವು ಇನ್ನೂ ಆಚೆಗಿರುತ್ತದೆ. ಅಲ್ಲಿ ಶಾಂತಿಯ ಅರಿವು ಕೂಡ ಮಾಯವಾಗುವುದು. ಏಕೆಂದರೆ, ಶಾಂತಿಯ ಬೋಧೆಯೂ ಸಹ ಮನಸ್ಸಿನ ಮೇಲೆ—ಎಷ್ಟೇ ಅಲ್ಪವಾಗಲೊಲ್ಲದೇಕೆ— ಭಾರವನ್ನುಂಟುಮಾಡುತ್ತದೆ. ಯಾವಾಗ ನಾವು ಶಾಂತಿಯ ಇರವನ್ನೂ ಮರೆತುಬಿಡುವೆವೋ ಆಗ ನಿಜವಾದ ಅರ್ಥದಲ್ಲಿ ಭಾವನೆಗಳ ಭಾರದಿಂದ ಅಥವಾ ಸಂಸ್ಕಾರದಿಂದ ಮುಕ್ತರಾಗುವೆವು. ಈ ಹಂತದಲ್ಲಿ ಸ್ಥಿತಿಯು ವಿಚಿತ್ರವಾಗಿರುತ್ತದೆ. ಅದು ವಸ್ತುತಃ ಆನಂದವೂ ಅಲ್ಲ, ಅಥವಾ ಬೇರೆ ಮತ್ತೇನಾದರೂ ಅಲ್ಲ. ಈ ಮಜಲಿನ ನಿಜಸ್ಥಿತಿಯನ್ನು ಶಬ್ದಗಳು ವರ್ಣಿಸಲಾರವು. ನಾವು ಕೊನೆಗೆ ಸಂಪಾದಿಸಬೇಕಾದ ಸ್ಥಿತಿಯು ಹೀಗಿಡೆಯಾದುದರಿಂದ ಯಾವನು ಇಂಥ ಸ್ಥಿತಿಯಲ್ಲಿ ನಿತ್ಯವಾಗಿ ನೆಲಸಿರುವನೋ, ಮತ್ತು ಯಾವನಿಗೆ ಅಭ್ಯಾಸಿಯ ಹೃದಯದಿಂದ ತೊಡಕು–ಆತಂಕಗಳನ್ನು ದೂರಮಾಡಿ ಆಧ್ಯಾತ್ಮಿಕ ಸ್ಥಿತಿಗಳನ್ನು ಸಂಚರಣಗೊಳಿಸುವ ಶಕ್ತಿಯಿದೆಯೋ ಆತನೇ ಸಮರ್ಥ ಗುರುವಾಗಲು ಅರ್ಹನು. ಈ ಮಟ್ಟಕ್ಕಿಂತ ಕೆಳಗಿನವನಾವನೂ ಎರಡನೆಯವರಿಗೆ ಆಧ್ಯಾತ್ಮಿಕ ತರಬೇತಿಯನ್ನು ಕೊಡಲು ಯೋಗ್ಯನಲ್ಲ. ನಮ್ಮ ಪ್ರಾಚೀನ ಮುನಿಗಳಿಂದ ಆರಂಭಿಸಲ್ಪಟ್ಟು ವಿಸ್ತೃತವಾಗಿ ರೂಢಿಯಲ್ಲಿದ್ದ 'ಯೌಗಿಕ ಪ್ರಾಣಾಹುತಿ'ಯ (Yogic transmission) ಪದ್ಧತಿಯು ಅದರ ಜನ್ಮಭೂಮಿಯಲ್ಲಿಯೆ ಮರೆತುಹೋಗಿರುವುದು ಅತಿ ಶೋಚನೀಯವಾದ ಸಂಗತಿಯಾಗಿದೆ. ಎಲ್ಲೋ ಕೆಲವರು ಮಾತ್ರ ಅದರ ಅಸ್ತಿತ್ವದಲ್ಲಿ ವಿಶ್ವಾಸವಿಡಲು ಮನಸ್ಸು ಮಾಡಬಹುದು. ಕೆಲ ಜನರು ಅದನ್ನು ತಪ್ಪಾಗಿ ವಿವರಣಮಾಡಿ ಅದು ಸಮ್ಮೋಹನವಿದ್ಯೆಯೆಂದೂ 'ಮೆಸ್ಮೆರಿಸಂ' ಎಂದೂ ಹೇಳಿ ಪರಿಹಾಸ ಮಾಡಲು ಯತ್ನಿಸುವರು. ಈ ಮಾತನ್ನು ನಾನು ನನ್ನ 'ರಾಜಯೋಗದ ಪ್ರಭಾವ' (Efficacy of Rajayoga) ವೆಂಬ ಗ್ರಂಥದಲ್ಲಿ ವಿವರಿಸಿದ್ದೇನೆ. ಉಚ್ಚ ಸ್ಥಿತಿಗಳನ್ನು

ಹೊಂದಲು ಕೇವಲ ಯೌಗಿಕ ಪ್ರಾಣಾಹುತಿಯ ಪದ್ಧತಿಯಿಂದಲ್ಲದೆ ಆಧ್ಯಾತ್ಮಿಕ ತರಬೇತಿಯು ಅನ್ಯಥಾ ಸಾಧ್ಯವಿಲ್ಲವೆಂಬುದನ್ನು ಇಲ್ಲಿ ನಿಮಗೆ ದೃಢವಾಗಿ ಹೇಳಬಲ್ಲೆ. ಇಂದಿನ ಸುಶಿಕ್ಷಿತಸಮಾಜದಲ್ಲಿ ಮೇಲಿಂದ ಮೇಲೆ ಕೇಳಿಬರುವ ಈ ಪದ್ಧತಿಯ ಉಲ್ಲೇಖವು, ಹಲವು ಧರ್ಮಗುರುಗಳಿಗೆ, 'ಪ್ರಾಣಾಹುತಿಯ ಬಗ್ಗೆ ಯಾವ ವಿಲಕ್ಷಣತೆಯೂ ಇಲ್ಲವೆಂ'ದು ಜನತೆಗೆ ತಿಳಿಸುತ್ತ ತಮ್ಮ ಅಯೋಗ್ಯತೆಯನ್ನು ಸಮರ್ಥಿಸಿಕೊಳ್ಳಲು ಆಸ್ಪದ ಕೊಟ್ಟಿದೆ. ಸಾಮಾನ್ಯವಾಗಿ, ಮಹಾತ್ಮರ ಅಥವಾ ಸಂತರ ಸಂಗದಲ್ಲಿರುವಾಗ ನಿಮ್ಮ ವಿಚಾರಗಳ ಕ್ಷೋಭವು ಕಡಮೆಯಾಗಿ ನೀವು ಕೆಲಕಾಲ ಮೊದಲಿಗಿಂತಲೂ ಹೆಚ್ಚು ಶಾಂತಿಯನ್ನು ಅನುಭವಿಸುವಿರಿ. ಇದು ಮಹಾತ್ಮರ ಪ್ರಾಣಾಹುತಿಯ ಪರಿಣಾಮವೆಂದು ಅವರು ಹೇಳಿಕೊಳ್ಳುವರು. ಈ ವಿವರಣೆಯನ್ನು ಕೊಡುವವರು ತಮ್ಮ ಅಯೋಗ್ಯತೆಯನ್ನು ಮುಚ್ಚಿಕೊಳ್ಳಲು ಜನರನ್ನು ವಂಚಿಸಬಯಸುವರು. ಅವರು ಪ್ರಾಣಾಹುತಿಯೆಂದು ಹೇಳುವುದು ನಿಜವಾಗಿ ಮಹಾತ್ಮರಿಂದುಂಟಾಗುವ ಭಕ್ತಿಪರಮಾಣುಗಳ ಸ್ವಯಂವಿಕಿರಣನಾಗಿದೆ. ಅದು ಅಲ್ಲಿ ನೆರೆದವರೆಲ್ಲರ ಮೇಲೂ ಪರಿಣಾಮವನ್ನುಂಟುಮಾಡುವುದರಿಂದ ಅವರು ಅಲ್ಲಿರುವ ವರೆಗೆ ಸ್ವಲ್ಪಮಟ್ಟಿಗೆ ಶಾಂತಿ ದೊರೆಯುತ್ತದೆ. ಅದು ಕೇವಲ ಸ್ವಾಭಾವಿಕ ಕ್ರಿಯೆಯಾಗಿದ್ದು ಪ್ರಾಣಾಹುತಿಯೊಂದಿಗೆ ಅದರ ಯಾವ ಸಂಬಂಧವೂ ಇಲ್ಲ. ಇಂಥ ಪರಮಾಣುಗಳು ಸಂತ-ಮಹಾತ್ಮರಿಂದಷ್ಟೇ ವಿಕಿರಣವಾಗದೆ ಧಾರ್ಮಿಕನಾಗಲಿ ದುಷ್ಟನಾಗಲಿ, ಸಾಧುವಾಗಲಿ ಕ್ರೂರನಾಗಲಿ, ಪ್ರತಿಯೊಬ್ಬನಿಂದಲೂ ವಿಕಿರಣವಾಗುತ್ತವೆ. ನೀವು ಒಬ್ಬ ಅಧರ್ಮಿಯ ಇಲ್ಲವೆ ನೀತಿಬಾಹಿರನ ಜೊತೆಯಲ್ಲಿ ಕೆಲಕಾಲವಿದ್ದರೆ ನಿಮ್ಮ ವಿಚಾರಗಳಾದರೂ ಸ್ವಲ್ಪಕಾಲ ಅದೇ ದಿಶೆಯಲ್ಲಿ ಹರಿಯತೊಡಗುವುವು. ಇಂಥ ವಿಕಿರಣದ ಪರಿಣಾಮವು ಕೇವಲ ಕೆಲಕಾಲವಿದ್ದು ನೀವು ಅದರಿಂದ ದೂರವಾದಾಗ ಇಲ್ಲದಾಗುವುದು. ಧರ್ಮಗುರುಗಳು ಉಪದೇಶಿಸಿದುದನ್ನು ಜನರು ಆಚರಣೆಗೆ ತರಲು ದುರ್ಲಕ್ಷಿಸುವರೆಂದು ದೂರುವುದಕ್ಕೆ ಇದೇ ಕಾರಣ. ಜನರು ಅವರ ಉಪದೇಶವನ್ನು ಕೇಳಿ ತಿರುಗಿ ಹೋದಾಗ ತಾವು ಕೇಳಿದುದನ್ನೆಲ್ಲ ಮನಸ್ಸಿನಲ್ಲಿ ಸ್ವಲ್ಪವೂ ಇಟ್ಟುಕೊಳ್ಳದೆ ಬಿಸುಟಬಿಡುವರು. ಇದರಲ್ಲಿ ಜನರ ದೋಷವೇನೂ ಇರದೆ ಉಪದೇಶಕರ ಇಲ್ಲವೆ ಗುರುಗಳ ದೋಷವಿದೆ.

ಯೆಂದು ನನಗೆನಿಸುತ್ತದೆ. ಏಕೆಂದರೆ, ತಾವು ವೇದಿಕೆಯ ಮೇಲಿಂದ ಉಪದೇಶಿಸಬೇಕೆನ್ನುವ ವಿಷಯವನ್ನು ಕೇಳುವವರಲ್ಲಿ ಸಂಚರಣಗೊಳಿಸುವ ಸಾಮರ್ಥ್ಯವು ಅವರಲ್ಲಿರುವುದಿಲ್ಲ. ಸಂಕೀರ್ತನದ ಕಾರ್ಯಕ್ರಮಗಳ ಬಗೆಗೂ ಇದೇ ರೀತಿಯ ವಿಚಾರಗಳನ್ನು ವ್ಯಕ್ತಪಡಿಸಲಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಉಂಟಾಗುವ ಶಾಂತ ವಾತಾವರಣವು ಪ್ರಾಣಾಹುತಿಯ ಪರಿಣಾಮವೆಂದು ಹೇಳಲಾಗುತ್ತದೆ. ಅದು ನಿಜವಾಗಿ ಮೇಳದೊಂದಿಗೆ ಹಾಡಲಾಗುವ ಗೀತಗಳ ಧ್ವನಿತರಂಗಗಳ ಪರಿಣಾಮ. ನಾವು ಎಲ್ಲ ಸಂಗೀತಕಚೇರಿಗಳಲ್ಲಿಯೂ ಇದನ್ನು ಅನುಭವಿಸುತ್ತೇವೆ. ಇಂಥ ಸಂದರ್ಭಗಳಲ್ಲಿ ನಮ್ಮ ಮನಸ್ಸು ನಮ್ಮ ದೃಷ್ಟಿಯಲ್ಲಿರುವ ಒಂದೇ ವಸ್ತುವಿನ ಮೇಲೆ ಕೇಂದ್ರೀಕೃತವಾಗಿರುವುದರಿಂದ ಬೇರೆ ವಸ್ತುಗಳ ಕಡೆಗೆ ಲಕ್ಷ್ಯಕೊಡುವುದಿಲ್ಲ. ಸಂಕೀರ್ತನದಲ್ಲಿ ನಮ್ಮ ವಿಚಾರಗಳು ಒಂದು ಧಾರ್ಮಿಕ ಆದರ್ಶದ ಮೇಲೆ ನೆಲೆಸಿರುವುದರಿಂದ ನಾವು ಸಹಜವಾಗಿಯೆ ಅದನ್ನು ನಮ್ಮ ಹೃದಯದಲ್ಲಿ ಅನುಭವಿಸುವೆವು. ಅದಕ್ಕೂ ಪ್ರಾಣಾಹುತಿಗೂ ಯಾವ ಸಂಬಂಧವೂ ಇಲ್ಲ. ಪ್ರಾಣಾಹುತಿಯ ಶಕ್ತಿಯು ಅತ್ಯುಚ್ಚ ತರಗತಿಯ ಒಂದು ಯೌಗಿಕ ಸಿದ್ಧಿಯಾಗಿದ್ದು ಅದರಿಂದ ಯೋಗಿಯು ತನ್ನ ಇಚ್ಛಾಶಕ್ತಿಯ ಮೂಲಕ ಯಾರಲ್ಲಿ ಬೇಕಾದರೂ ಯೌಗಿಕಶಕ್ತಿಯನ್ನಾಗಲಿ ದೈವೀ ಪ್ರಭೆಯನ್ನಾಗಲಿ ತುಂಬಬಲ್ಲನು; ಹಾಗು ಆತನ ಆಧ್ಯಾತ್ಮಿಕ ಪ್ರಗತಿಗೆ ಬಾಧಕವಾದ ಯಾವುದೇ ಅನಿಷ್ಟ ಸಂಗತಿಯನ್ನು ತೊಲಗಿಸಬಲ್ಲನು. ತನ್ನ ಸುತ್ತುಮುತ್ತಲೂ ನೆರೆದವರ ಮೇಲಷ್ಟೇ ಅಲ್ಲದೆ ತನ್ನಿಂದ ದೂರವಿರುವವರ ಮೇಲೆಯೂ ಅವನು ಈ ಶಕ್ತಿಯನ್ನು ಪ್ರಯೋಗಿಸಬಲ್ಲನು. ಇದನ್ನು ಬೇಕಾದಾಗ ಬೇಕಾದಹಾಗೆ ಉಪಯೋಗಿಸಬಹುದು. ಯಾವ ಸ್ಥಿತಿಯನ್ನು ಹೊಂದಲು ಸಾಧಕನಿಗೆ ಒಂದು ಜೀವಿತಕಾಲವೇ ಬೇಕಾಗಬಹುದೋ ಅಂತಹ ಉಚ್ಚಸ್ಥಿತಿಯನ್ನು ತಾತ್ಪೂರ್ತಿಕವಾಗಿಯಾಗಲಿ ಶಾಶ್ವತವಾಗಿಯಾಗಲಿ, ಈ ಶಕ್ತಿಯ ಮೇಲೆ ಪ್ರಭುತ್ವವುಳ್ಳವನು, ದೃಷ್ಟಿಮಾತ್ರದಿಂದ ಅಭ್ಯಾಸಿಯಲ್ಲಿ ಉಂಟುಮಾಡಬಹುದು. ಇದು ಕೇವಲ ಜಂಬದ ಮಾತಾಗಿರದೆ ತೀರ ಸತ್ಯವಾಗಿದ್ದು ಯಾರು ಬೇಕಾದರೂ ಪ್ರಾಯೋಗಿಕವಾಗಿ ಯಾವಾಗಲಾದರೂ ಪ್ರಮಾಣಿಸಿ ನೋಡಬಹುದಾಗಿದೆ. ಅನೇಕ ಸಲ ಋಷಿಗಳು ಪ್ರಾಣಾಹುತಿಯ ಬಲದಿಂದ

ಎವೆಯಿಕ್ಕುವುದರೊಳಗಾಗಿ ಮನುಷ್ಯನ ಸ್ವಭಾವವನ್ನೇ ಪರಿವರ್ತಿಸಿದ್ದಾರೆ. ನನ್ನ ಗುರುಗಳಾದ ಫತೆಹ್‌ಗಡ ನಿವಾಸಿ ಸಮರ್ಥಗುರು ಶ್ರೀರಾಮಚಂದ್ರಜಿ ಮಹಾರಾಜರು, ಸ್ವಾಮಿ ವಿವೇಕಾನಂದರು ಹಾಗು ಇನ್ನಿತರ ಮಹರ್ಷಿಗಳ ಅದ್ಭುತ ಉದಾಹರಣೆಗಳು ಇದಕ್ಕೆ ವಿಪುಲವಾದ ಪ್ರಮಾಣಗಳಾಗಿವೆ.

ಎಂತಹ ಮಾರ್ಗದರ್ಶಿ ಅಥವಾ ಗುರುವನ್ನು ಆರಿಸಿಕೊಳ್ಳಬೇಕೆಂಬ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯುವುದು ಕಠಿಣವಲ್ಲ. ನಮ್ಮ ದೃಷ್ಟಿಯು ಅಂತಿಮ ಗುರಿಯತ್ತ ನೆಟ್ಟಿದ್ದರೆ, ಅದಕ್ಕಿಂತ ಕೆಳಗಿನ ಸ್ತರದಲ್ಲಿದ್ದ ಯಾರಿಂದಲೂ ನಮಗೆ ತೃಪ್ತಿಯಾಗುವುದಿಲ್ಲ. ಪ್ರತಿಯೊಬ್ಬ ಸಂತನಿಗಾಗಲಿ ಯೋಗಿಗಾಗಲಿ ತನ್ನದೇ ಆದ ಒಂದು ಸಿದ್ಧಿಯ ಅಥವಾ ಆತ್ಮೋನ್ನತಿಯ ಮಟ್ಟವಿರುತ್ತದೆ. ನಾವು ಶ್ರದ್ಧಾಭಕ್ತಿಗಳಿಂದ ಅವನನ್ನಾಶ್ರಯಿಸಿ ಅವನ ಅತ್ಯುನ್ನತ ಸ್ಥಿತಿಯೊಂದಿಗೆ ವಿಲೀನ ಹೊಂದಿದ್ದಾದರೆ ನಾವೂ ಅವನ ಮಟ್ಟ-ವನ್ನೇ ಮುಟ್ಟುವೆವು. ಆದುದರಿಂದ ಅತ್ಯುಚ್ಚ ಸಿದ್ಧಿಯನ್ನು ಪಡೆದವನನ್ನೇ ನಮ್ಮ ಗುರುವೆಂದು ಆಯ್ದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ದುರ್ದೈವದಿಂದ ನಾವು ಕೆಳಮಟ್ಟದ ಒಬ್ಬನನ್ನು ಆರಿಸಿಕೊಳ್ಳಲು ಪ್ರೇರಿತರಾದ ಪಕ್ಷ-ದಲ್ಲಿ ಅದಕ್ಕೆ ತಕ್ಕಂತೆ ಅಂತಿಮ ಧ್ಯೇಯಸಾಧನೆಯಲ್ಲಿ ಹಿಂದೆಬೀಳುವೆವು. ಆಧ್ಯಾತ್ಮಿಕ ಗುರುವು, ಕನಿಷ್ಠ ಪಕ್ಷಕ್ಕೆ, ಎಲ್ಲಿ ಪ್ರತಿಯೊಂದು ಸಂಗತಿಯು ಈ ಭೌತಿಕ ಜಗತ್ತಿನಲ್ಲಿ ಘಟಿಸುವ ಮೊದಲು ಸೂಕ್ಷ್ಮರೂಪದಲ್ಲಿ ಗೋಚರಿಸು-ವುದೋ, ಆ ಬ್ರಹ್ಮಾಂಡ ಮಂಡಲದ ವರೆಗಾದರೂ ( ವಿರಾಡ್ ದೇಶವೆಂದೂ ಅದಕ್ಕೆ ಸಂಜ್ಞೆ) ಮುಟ್ಟದೆ, ಸಾಮಾನ್ಯವಾಗಿ ತಾನು ಅನ್ಯರಿಗೆ ತರಬೇತಿ-ಯನ್ನು ಕೊಡಲು ಯೋಗ್ಯನೆಂದು ತಿಳಿಯಬಾರದು. ಗುರುವು ಆ ವಲಯ-ದೊಡನೆ ಅಥವಾ ಮಟ್ಟದೊಡನೆ ಸಂಬಂಧವೇರ್ಪಡಿಸಿಕೊಂಡಾಗ ಶಕ್ತಿಯ ಅಕ್ಷಯ ಭಾಂಡಾರದೊಂದಿಗೆ ಆತನ ಸತತ ಸಂಪರ್ಕವು ಬೆಳೆಯುವುದು. ಇದರ ವಿರುದ್ಧವಾಗಿ, ಯಾವನಾದರೊಬ್ಬನು ಈ ಸ್ಥಿತಿಯನ್ನು ಹೊಂದದೆ ಪರರಿಗೆ ಅಧ್ಯಾತ್ಮದಲ್ಲಿ ತರಬೇತಿಯನ್ನು ಕೊಡುವ ಕೆಲಸವನ್ನು ಕೈಕೊಂಡು-ದಾದರೆ, ಅವನು ಕೇವಲ ತನ್ನ ಶಕ್ತಿಯನ್ನು ಕಳೆದುಕೊಳ್ಳುವನಷ್ಟೇ ಅಲ್ಲದೆ ತನ್ನಲ್ಲಿ ತರಬೇತಿಪಡೆಯುವವರ ಸಂಸ್ಕಾರ ಮತ್ತು ಸ್ಥೂಲತೆಗಳಿಂದ ದೂಷಿತ-ನಾಗುವನು. ಇದರ ಪರಿಣಾಮವಾಗಿ ಆತನು ಬಹುಬೇಗ ತಾನೇ ಭ್ರಷ್ಟ

ನಾಗುವನು. ನಮ್ಮ ಸಂಸ್ಥೆಯಲ್ಲಿ ಅನ್ಯರನ್ನು ತರಬೇತಿಗೊಳಿಸಲು ಈ ಮಜಲಿನಲ್ಲಿಯೂ ಸಾಮಾನ್ಯವಾಗಿ ಅಪ್ಪಣೆಕೊಡಲಾಗುವುದಿಲ್ಲ. ವಾಸ್ತವಿಕವಾಗಿ ಒಬ್ಬ ಮನುಷ್ಯನಲ್ಲಿ ತಾನು ಗುರುವೆಂಬ ಅಥವಾ ಶಿಕ್ಷಕನೆಂಬ ಭಾವನಾ ಲೇಶವೂ ಹೃದಯದೊಳಗೆ ಬಾರದಿದ್ದಾಗ ಮಾತ್ರ ತರಬೇತಿಗೊಳಿಸುವ ಕೆಲಸಕ್ಕೆ ಯೋಗ್ಯನಾಗುವನು. ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ತಾನು ಗುರುವೆಂಬ ಭಾವನೆಯು ಬಂದುದಾದರೆ ಯಾವಜ್ಜೀವನವೂ ಆತನು ಗುರುವಾಗುವ ಯೋಗ್ಯತೆಯನ್ನು ಕಳೆದುಕೊಳ್ಳುವನೆಂದು ನನ್ನ ನಂಬುಗೆ. ಆತನು ಆತ್ಮಪ್ರಖ್ಯಾತಿಯ ಮತ್ತು ಶ್ರೇಷ್ಠತೆಯ ಭಾವನೆಯನ್ನು ಹೃದಯದಲ್ಲಿಟ್ಟುಕೊಂಡಿರುವನೆಂಬುದನ್ನು ಈ ವಿಚಾರದ ಅಸ್ತಿತ್ವವೇ ತೋರಿಸಿಕೊಡುತ್ತದೆ. ತಾನು ಗುರುವೆಂಬ ಭಾವನೆಯನ್ನು ಇರಗೊಟ್ಟದ್ದಾದರೆ ತೀವ್ರವೇ ಅದು ಅತಿಸ್ಥೂಲರೂಪದ ಅಹಂಕಾರವೆನಿಸುವ ಗರ್ವವಾಗಿ ಬೆಳೆದು, ಅದರ ಫಲವಾಗಿ ಗುರುವಿನಲ್ಲಿ ಅತಿಕೆಟ್ಟ ದೋಷಗಳಾಗಿ ಪರಿಣಮಿಸುವುದು. ಆದುದರಿಂದ ಗುರುವಾಗಿ ಕಾರ್ಯಕ್ಷೇತ್ರದಲ್ಲಿ ಬರುವಮೊದಲೇ ಮನುಷ್ಯನು ಈ ಅನಿಷ್ಟಗಳನ್ನು ತೊಲಗಿಸಬೇಕು. ದೇವರೇ ನಿಜವಾದ ಗುರುವಾಗಿದ್ದು ನಾವು ಆತನಿಂದಲೇ ಬೆಳಕನ್ನು ಪಡೆಯುವೆವು. ಆದರೆ ಸಾಧಾರಣ ಸಾಮರ್ಥ್ಯದ ಮನುಷ್ಯನಿಗೆ ನೇರವಾಗಿ ದೇವರಿಂದ ಪ್ರೇರಣೆಯನ್ನು ಪಡೆಯುವುದು ಅತ್ಯಂತ ಕಠಿಣವಾದುದರಿಂದ ಸರ್ವಶಕ್ತನೊಂದಿಗೆ ತನ್ನ ಸಂಬಂಧವನ್ನು ಸ್ಥಾಪಿಸಿದ ನಮ್ಮ ಸಹಜೀವಿಗಳಲ್ಲೊಬ್ಬನ ಸಹಾಯವನ್ನು ಅರಸುವೆವು. ಅಂತೂ ಯಾವನೊಬ್ಬ ಮನುಷ್ಯನು ತಾನು ಗುರುವೆಂದು ನಮ್ಮ ಮುಂದೆ ಬಂದರೆ, ದೇವರಿಗೆ ಸಲ್ಲಬೇಕಾದ ಸ್ಥಾನವನ್ನು ಆತನು ಅಪಹರಿಸುವನಾದ ಕಾರಣ, ಅದು ಈಶ್ವರನಿಂದೆಯಲ್ಲದೆ ಮತ್ತೇನೂ ಅಲ್ಲವೆಂಬುದು ಸುಸ್ಪಷ್ಟವಾಗಿದೆ. ಆದುದರಿಂದ ಆತನು ತನ್ನನ್ನು ಪರಮಗುರುವಿನ ಹೆಸರಿನಲ್ಲಿ ಮಾನವತೆಯ ಸೇವೆಯನ್ನು ಮಾಡುವ ಅತಿ ನಮ್ರ ಭಗವತ್ಸೇವಕನೆಂದು ಭಾವಿಸಬೇಕು. ಇದರಿಂದಾಗಿ, ದುರ್ದೈವದಿಂದ ಇದೀಗ ಸರ್ವಸಾಮಾನ್ಯವಾಗಿ ತೋರಿಬರುತ್ತಿರುವ ಅಹಂಕಾರಕ್ಕೂ ಆದರ ಪರಿಣಾಮರೂಪವಾದ ಅನಿಷ್ಟಗಳಿಗೂ ಆತನಲ್ಲಿ ಎಡೆಯಿಲ್ಲದಂತಾಗುವುದು. ಈ ಅನಿಷ್ಟಗಳಿದ್ದಲ್ಲಿ ಸತ್ಯವಸ್ತುವು ಪೂರ್ಣವಾಗಿ ಲುಪ್ತವಾಗಿರುತ್ತದೆ. ಆದುದರಿಂದ ಗುರು ತನ್ನ ಹೃದಯದೊಳಗಿಂದ ಶ್ರೇಷ್ಠತೆಯ ಮತ್ತು ಆಧಿಕ್ಯದ

ಅತ್ಯಲ್ಪ ಭಾವನೆಯನ್ನು ಕೂಡ ತೆಗೆದುಹಾಕಿ ತಾನು ಮಾನವತೆಯ ಅತಿ ನಮ್ರ ಸಹಚರನೆಂದಾಗಲಿ ಸೇವಕನೆಂದಾಗಲಿ ತಿಳಿದುಕೊಳ್ಳಬೇಕು. ಪ್ರಾತಃಸ್ಮರಣೀಯರಾದ ನನ್ನ ಗುರುಗಳು ಇದಕ್ಕೆ ನಿದರ್ಶನವಾಗಿದ್ದರು. ಅವರು ತಮ್ಮ ಜೀವಮಾನದಲ್ಲೆಲ್ಲ ತಮ್ಮ ಜೊತೆಗಾರರನ್ನು ಬಂಧುಗಳೆಂದೇ ತಿಳಿದು ನಡೆದರು. ತಮ್ಮ ಶಿಷ್ಯರಿವರೆಂಬ ಭಾವನೆಯು ಒಮ್ಮೆಯಾದರೂ ಅವರ ಮನಸ್ಸಿನಲ್ಲಿ ಸುಳಿಯಲಿಲ್ಲ. ಅವರು ತಮ್ಮ ಶಿಷ್ಯರ ವ್ಯಕ್ತಿಗತ ಸೇವೆಯನ್ನು ಸಹ ಮಾಡಲು ಸದಾ ಸಿದ್ಧರಿರುತ್ತಿದ್ದರಲ್ಲದೆ ಎಷ್ಟೋ ಸಲ ಅವರಿಗೆ (ಶಿಷ್ಯರಿಗೆ) ತಿಳಿಯದಂತೆಯೆ ಅವರ ಸೇವೆ ಮಾಡುತ್ತಿದ್ದರು. ಗುರು ತನ್ನ ಗುರುಸ್ಥಾನವನ್ನು ಬಿಟ್ಟುಕೊಟ್ಟು ಮಾನವತೆಯ ಒಬ್ಬ ಸಾಮಾನ್ಯ ಸೇವಕನೆಂದು ಭಾವಿಸುವುದು ಅತ್ಯಗತ್ಯವಾದುದೆಂದು ನಾನು ತಿಳಿಯುತ್ತೇನೆ. ತೀರ ಆವಶ್ಯಕ ಪ್ರಸಂಗಗಳನ್ನು ಬಿಟ್ಟು ಉಳಿದ ವೇಳೆಯಲ್ಲಿ ಶಿಷ್ಯರಿಂದ ವೈಯಕ್ತಿಕ ಸೇವೆಯನ್ನು ಪಡೆಯುವ ಆತನ ಅಧಿಕಾರವು ಸಮರ್ಥನೀಯವಲ್ಲ. ಅದಾದರೂ ತಾನು ಸ್ವಂತ ಶಿಷ್ಯನಿಗೆ ಮಾಡಬಹುದಾದ ಪರಿಮಿತಿಯಲ್ಲಿಯೆ ಇರಬೇಕು. ಈಗಿನ ಕಾಲದಲ್ಲಿ ಗುರುಗಳೆನ್ನಿಸಿಕೊಳ್ಳುವವರನೇಕರು ಈ ಸೇವಾ ಪದ್ಧತಿಯನ್ನು ಪ್ರೋತ್ಸಾಹಿಸುವರು. ಏಕೆಂದರೆ ಅದು ಅವರಿಗೆ ವೈಯಕ್ತಿಕ ಸೌಖ್ಯವನ್ನು ಕೊಡುವುದಲ್ಲದೆ ಅವರ ಅಹಂಮನ್ಯತೆಯನ್ನು ಪೋಷಿಸುವುದು. ಗುರುವಿನ ಪಾದಗಳನ್ನು ಮುಟ್ಟುವುದರಿಂದಾಗಲಿ ಆತನ ಅವಯವಗಳನ್ನು ಒತ್ತುವುದರಿಂದಾಗಲಿ ಆತನಿಂದ ಶಕ್ತಿ ಪ್ರವಾಹವು ಶಿಷ್ಯನಲ್ಲಿ ಪ್ರವೇಶಿಸಿ ಒಳ್ಳೆಯ ಸಂಸ್ಕಾರಗಳನ್ನುಂಟುಮಾಡಲು ಸಹಾಯವಾಗುವುದೆಂದು ಅವರು ಹೇಳುತ್ತಾರೆ. ಈ ಪ್ರಕಾರ ಈ ಪದ್ಧತಿಯ ಮೇರೆಗೆ, ಶಿಷ್ಯನು ತನ್ನ ಗುರುವಿನಿಂದ ಹೆಚ್ಚಾಗಿ ಪಾವಿತ್ರ್ಯವನ್ನೂ ಧಾರ್ಮಿಕತೆಯನ್ನೂ ಆಕರ್ಷಿಸುತ್ತಾನೆ. ಅದು ನಿಜವಿರಲೂ ಬಹುದು; ಆದರೆ ಗುರುವು ಅದೇ ಸೇವೆಯನ್ನು ಶಿಷ್ಯನಿಗೆ ಮಾಡಿದರೆ ಹೀಗಾಗಲು ಸಾಧ್ಯವಿಲ್ಲವೇ ಎಂದು ನಾನು ಅವರಿಗೆ ಕೇಳ ಬಯಸುತ್ತೇನೆ. ಇದನ್ನು ನಿರಾಕರಿಸುವ ಸಾಹಸವು ಯಾರಿಗೂ ಇಲ್ಲವೆಂದು ನನ್ನ ಭಾವನೆ. ಎಂದಮೇಲೆ ಅದರ ಹಿಂದಿನ ಉದ್ದೇಶವು ವೈಯಕ್ತಿಕ ಅನುಕೂಲತೆ ಮತ್ತು ಸೌಖ್ಯವೆಂಬುದು ಸ್ಪಷ್ಟವಾಗಿದೆ. ನನ್ನ ನಮ್ರ ಅಭಿಪ್ರಾಯದ ಮೇರೆಗೆ ಈ ಪದ್ಧತಿಯು ಈಗ ಕಾಲಮಾನಕ್ಕನುಸಾರವಾಗಿ ಇರುವುದು ಮೂರು-

ವಾಗಬೇಕು; ಮತ್ತು ಸ್ವತಃ ಗುರುವು ತನ್ನ ಶಿಷ್ಯರಿಗೆ ಇಂಥ ಸೇವೆಯನ್ನು ಮಾಡಬೇಕು. ನಿಜವಾಗಿಯೂ ಗುರುವಿನ ಸ್ಥಾನವು ಬಹು ವಿಚಿತ್ರವಾಗಿದೆ. ತಾನು ಗುರುವೆಂದೂ ಆ ಕಾರಣದಿಂದಾಗಿ ಶಿಷ್ಯರಿಗಿಂತಲೂ ಬಹಳ ಹೆಚ್ಚಿನವನೆಂದೂ ತಿಳಿದುದಾದರೆ ಅದು ಗುರುವಿನಲ್ಲಿರುವ ತೀರ ಕೆಟ್ಟಬಗೆಯ ಅಹಂಕಾರ. ವಸ್ತುತಃ ಗುರುವಿನ ಸೇವೆಯಲ್ಲಿ ಪ್ರೇಮಭಕ್ತಿಗಳಿಂದ ತತ್ಪರನಾಗುವುದು ಶಿಷ್ಯನಿಗೆ ಸೇರಿದ ಸಂಗತಿಯೆ ಹೊರತು ಅದನ್ನು ಗುರುವು ತನ್ನ ಹಕ್ಕು ಇಲ್ಲವೆ ಬಾಧ್ಯತೆಯೆಂದು ಅಪೇಕ್ಷಿಸತಕ್ಕುದಲ್ಲ. ಈ ಸಂದರ್ಭದಲ್ಲಿ ನನಗೆ ಒಂದು ಉದಾಹರಣೆಯು ನೆನಪಿಗೆ ಬರುವುದು. ಒಮ್ಮೆ ಒಬ್ಬ ತಿಳಿಗೇಡಿಯು ಇಂಥ ಪ್ರಚಲಿತ ಮಾದರಿಯ ಗುರುವಿನ ಬಳಿಗೆ ಹೋಗಿ ಆತನ ಶಿಷ್ಯನಾಗುವುದಾಗಿ ಬಿನ್ನವಿಸಿದ. ತನ್ನ ಗುರುತ್ವದ ದೊಡ್ಡಿಯಲ್ಲಿ ಒಂದು ವ್ಯಕ್ತಿಯು ಹೆಚ್ಚಾಗುವ ನಿರೀಕ್ಷಣೆಯಿಂದ ಸಂತುಷ್ಟನಾದ ಗುರುವು ಆತನಿಗೆ ಶಿಷ್ಯನ ಕರ್ತವ್ಯಗಳನ್ನು ಕಲಿಸಲಾರಂಭಿಸಿದನು. "ನೀನು ಯಾವಾಗಲೂ ಗುರುವಿನ ವ್ಯಕ್ತಿಗತ ಆವಶ್ಯಕತೆಗಳ ಹಾಗು ಸೇವೆಗನುಗುಣವಾಗಿ ಶುಶ್ರೂಷೆ ಮಾಡುತ್ತ ಆತನಿಗೆ ಪೂರ್ಣಅಧೀನನಾಗಿರಬೇಕು. ದಿನಾಲು ಮುಂಜಾನೆ ಹಾಗು ಸಂಜೆಗೆ ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಆತನು ಮಲಗಿದ ಮೇಲೆ ನೀನು ಮಲಗತಕ್ಕದ್ದು; ಆತನು ಏಳುವ ಮೊದಲೇ ನೀನು ಏಳತಕ್ಕದ್ದು" ಎಂದು ಹೇಳಿದನು. ಆ ಬಡಪ್ರಾಣಿಯು ತಾನು ಇದನ್ನೆಲ್ಲ ಮಾಡಲು ಅಸಮರ್ಥನೆಂದು ಭಾವಿಸಿ ಮುಗ್ಧ ರೀತಿಯಲ್ಲಿ "ಇದನ್ನು ತಪ್ಪದೆ ನಾನು ಮಾಡದಿದ್ದರೆ ಏನಾಗುವುದು ?" ಎಂದು ಕೇಳಿದನು. "ನಿನ್ನನ್ನು ಹೊರದೂಡಲಾಗುವುದಲ್ಲದೆ ನಿನ್ನ ಪ್ರಗತಿಯು ಮುಗಿತಾಯವಾಯಿತೆಂತಲೂ ತಿಳಿ" ಎಂದು ಗಡುಸಾಗಿ ಉತ್ತರ ಬಂದಿತು. ಆಗ ಆತನು ನಮ್ರನಾಗಿ, "ಹಾಗಾದರೆ, ಮಹಾಶಯರೇ, ನನ್ನನ್ನೇ ನೀವು ಗುರುವೆಂದು ಸ್ವೀಕಾರ ಮಾಡಿದರೆ ದಯೆ ತೋರಿದಂತಾಗುವುದು" ಎಂದು ನುಡಿದನು. ಗುರು–ಶಿಷ್ಯರ ನಡುವೆ ಅಸೂಯೆ, ತಿಕ್ಕಾಟಗಳು ಸಂಭವಿಸುವ ದೃಷ್ಟಾಂತಗಳನ್ನು ನಾವು ಅನೇಕ ಬಾರಿ ನೋಡುವೆವು. ಇದೆಲ್ಲದರ ಕಾರಣವೇನು ? ಕೇವಲ ಸ್ವಾರ್ಥ ಅಥವಾ ವೈಯಕ್ತಿಕ ಲಾಭವೇ ಕಾರಣ. ಆದುದರಿಂದ ಗುರುವು ಯಾವುದೇ ವೈಯಕ್ತಿಕ ಉದ್ದೇಶ ಅಥವಾ ಸ್ವಾರ್ಥದಿಂದ ಸಂಪೂರ್ಣ ಅಲಿಪ್ತ

ನಾಗಿರುವುದು ಅಗತ್ಯ. ಅಭಿಮಾನದ ಇಲ್ಲವೆ ಶ್ರೇಷ್ಠತ್ವದ ಎಲ್ಲ ಭಾವನೆ-ಗಳಿಂದ ಆತ ಪೂರ್ಣ ಮುಕ್ತನಾಗಿರಬೇಕು. ಅವನು ಕೇವಲ ನಿಃಸ್ವಾರ್ಥಿ-ಯೂ ಮಾನವತೆಯ ನಿಜವಾದ ಸೇವಕನೂ ಆಗಿದ್ದು, ಕೀರ್ತಿ–ಕಾಂಚನಗಳ ಗುಪ್ತ ಆಶೆಯಿಂದ ದೂರನಾಗಿ, ಕೇವಲ ಅವ್ಯಾಜ ಪ್ರೇಮದಿಂದಲೇ ಜನತೆಗೆ ಬೋಧಿಸುವವನಾಗಬೇಕು. ಅತಿ ದೂರತಮ ಎಲ್ಲೆಯವರೆಗೆ ಆತನ ಗತಿ-ಯಿರಬೇಕಲ್ಲದೆ ಆತನಲ್ಲಿ ಯೌಗಿಕ ಪ್ರಾಣಾಹುತಿಯ ಶಕ್ತಿಯಿರಬೇಕು. ನಮಗೆ ಪೂರ್ಣ ಯಶ ದೊರೆಯಬೇಕಾದರೆ ಇಂಥ ಮನುಷ್ಯನನ್ನೇ ನಮ್ಮ ಮಾರ್ಗದರ್ಶಿಯನ್ನಾಗಿ ಆರಸಬೇಕು. ಅಯೋಗ್ಯ ಗುರುವಿನ ಮಾರ್ಗ-ದರ್ಶನಕ್ಕೊಳಗಾಗುವುದಕ್ಕಿಂತ ಇಡೀ ಜೀವನ ಗುರುವಿಲ್ಲದೆ ಇರುವುದು ಲೇಸು.

---

## ಅಧ್ಯಾಯ: ೫

# ಆಧ್ಯಾತ್ಮಿಕ ತರಬೇತಿ

ನಮ್ಮ ಇಂದಿನ ನೈತಿಕ ಹಾಗು ಧಾರ್ಮಿಕ ಅವನತಿಯು, ಹೆಚ್ಚಾಗಿ ನಮ್ಮ ಪರಿಸರದ ಹಾಗು ತಪ್ಪು ತರಬೇತಿಯ ಮೂಲಕವಾಗಿದೆ. ಶಿಕ್ಷಣದ ಹಾಗು ತರಬೇತಿಯ ಎಲ್ಲ ಹಂತಗಳಲ್ಲಿಯೂ ಮನಸ್ಸಿನ ಸರಿಯಾದ ರೂಪಣವನ್ನು ಸಂಪೂರ್ಣವಾಗಿ ದುರ್ಲಕ್ಷಿಸಲಾಗುತ್ತಿದೆ. ಮನುಷ್ಯನು ಸುಖ-ಸೌಕರ್ಯಗಳಿಂದ ಕೂಡಿದ, ಅಚ್ಚುಕಟ್ಟಾದ ಜೀವನವನ್ನು ಸಾಗಿಸಲು ಸಾಧ್ಯವಾಗಬೇಕೆಂಬ ದೃಷ್ಟಿಯಿಂದ ಒಳ್ಳೆಯ ಲೌಕಿಕ ತರಬೇತಿಯನ್ನು ಕೊಡುವ ಪ್ರಯತ್ನ ನಡೆಯುತ್ತಿದೆ. ಆದರೆ ಆತ್ಮಸಾಕ್ಷಾತ್ಕಾರಕ್ಕಾಗಿ ಬೇಕಾಗುವ ಮನಸ್ಸಿನ ತರಬೇತಿಯನ್ನು ದುರ್ಲಕ್ಷ್ಯಮಾಡಲಾಗಿದೆ. ಜೀವನದ ಈ ಮಹತ್ತ್ವಪೂರ್ಣವಾದ ಸಮಸ್ಯೆಗೆ ತೀರ ಕಡಮೆ ಪ್ರಾಶಸ್ತ್ಯಕೊಡಲಾಗಿದೆ. ದಿನಾಲು ದೇವಿ-ದೇವತೆಯರ ಸ್ತುತಿಪರವಾದ ಶ್ಲೋಕಗಳನ್ನು ಪಠನ ಮಾಡುವುದಾಗಲಿ, ಪೂಜೆಯ ರೂಪದಲ್ಲಿ ಕೆಲವು ಔಪಚಾರಿಕ ಸಂಪ್ರದಾಯಗಳನ್ನಾಚರಿಸುವುದಾಗಲಿ-- ಇವಿಷ್ಟನ್ನೇ ಜನತೆಗೆ ಕಲಿಸಲಾಗುತ್ತದೆ. ಅವರು ತಮ್ಮ ಜೀವನಾವಧಿ ಅದನ್ನಾಚರಿಸಿದರೂ ಯಾವ ಲಾಭವನ್ನೂ ಹೊಂದುವುದಿಲ್ಲ. ಆಂತರಿಕ ಶಾಂತಿಯ ಕೊರತೆಯು ಅವರಲ್ಲಿ ಹಾಗೆಯೆ ಉಳಿಯಬತ್ತದೆ. ಇಚ್ಛೆಗಳು, ಪ್ರಲೋಭನಗಳು ಮತ್ತು ಭಾವೋದ್ರೇಕ ಮುಂತಾದ ಮನೋವ್ಯಾಪಾರಗಳು ಮೊದಲಿದ್ದ ಹಾಗೆಯೆ ಇರುವುವು. ತರಬೇತಿಯ ಮುಖ್ಯ ಉದ್ದೇಶವೆಂದರೆ, ಮನುಷ್ಯನು ಸಾಧ್ಯವಾದಷ್ಟು ಹೆಚ್ಚು ದೈವೀಗುಣಗಳನ್ನು ಆತ್ಮಗತಮಾಡಿಕೊಳ್ಳುತ್ತ ಹೋಗಬೇಕು. ಇದನ್ನು ಸಾಧಿಸದಿದ್ದರೆ ತರಬೇತಿಯ ಪದ್ಧತಿಯು ದೋಷಯುಕ್ತವೂ ತತ್ಪರಿಣಾಮವಾಗಿ ಅಪ್ರಯೋಜಕವೂ ಆಗಿರುವುದೆಂಬುದು ಸ್ಪಷ್ಟವಿದೆ. ಮನುಷ್ಯನ ಸರಿಯಾದ ರೂಪಣವು, ನಮ್ಮ ಎಲ್ಲ ಇಂದ್ರಿಯಗಳ ಹಾಗು ಶಕ್ತಿಗಳ ಬಳಕೆಯಲ್ಲಿ ಮಿತತ್ವದಿಂದೊಡಗೂಡಿದ ಮನಸ್ಸಿನ ರಚನೆಯನ್ನೊಳಗೊಳ್ಳುತ್ತದೆ.

ಈ ಪ್ರಕಾರ, ಸಮರ್ಥ ಗುರುವಿನ ನೇತೃತ್ವದಲ್ಲಿ ನಡೆಯುವ ಒಳ್ಳೆಯ ತರ-ಬೇತಿಯು ನಮ್ಮ ಸರಿಯಾದ ರೂಪಣದಲ್ಲಿ ಬಹಳ ಮಹತ್ತ್ವದ್ದಾಗಿದೆ. ಅದಿಲ್ಲದೆ ಅಧ್ಯಾತ್ಮದಲ್ಲಿ ಉಚ್ಚಸಿದ್ಧಿಗಳು ಎಂದಿಗೂ ಸಾಧ್ಯವಾಗುವುದಿಲ್ಲ. ಅನೇಕ ಜನರಿಗೆ ಒಂದಿಲ್ಲೊಂದು ರೀತಿಯಲ್ಲಿ ದೇವರ ಕಡೆಗೆ ಸ್ವಾಭಾವಿಕ-ವಾದ ಒಲವು ಇದ್ದೇ ಇರುವುದಾದರೂ ಆತನನ್ನು ಸಾಕ್ಷಾತ್ಕರಿಸಿಕೊಳ್ಳುವು-ದರಲ್ಲಿ ಯಶಸ್ವಿಯಾದವರು ವಿರಳ. ಇದಕ್ಕೆ ಕಾರಣವೆಂದರೆ ದೋಷಯುಕ್ತ ಮಾರ್ಗದರ್ಶನ ಮತ್ತು ತಪ್ಪು ತರಬೇತಿ. ಇದು ಮನುಷ್ಯನನ್ನು ನಿಜವಾದ ದಾರಿಯಿಂದ ದೂರವೊಯ್ಯುತ್ತದೆ. ಆದರ ಪರಿಣಾಮವಾಗಿ ಆತನು ಕೊನೆಯ ವರೆಗೂ ಭ್ರಷ್ಟನಾಗುತ್ತಾನೆ. ಈಗ, ಸಾಮಾನ್ಯಶಕ್ತಿಯ ಮನುಷ್ಯನಿಗೆ, ತನ್ನ ತರಬೇತಿಯು ಸರಿಯಾದ ದಾರಿಯಲ್ಲಿ ಸಾಗಿದೆಯೋ ಇಲ್ಲವೋ ಎಂಬು-ದನ್ನು ನಿರ್ಣಯಿಸುವುದು ಸಾಕಷ್ಟು ಕಠಿಣ ಕೆಲಸವಾಗಿದೆ. ಒಬ್ಬ ಮನುಷ್ಯನು ತಾನು ಯಾರನ್ನು ಗುರುವೆಂದು ಸ್ವೀಕರಿಸುವನೋ ಆತನ ಉಪದೇಶಗಳನ್ನು ವಿವೇಚನೆಯಿಲ್ಲದೆ ಅನುಸರಿಸುತ್ತ, ಆತನು ಹೇಳಿದಂತೆ ಸಾಧನೆಮಾಡುತ್ತ ಹೋಗುವನು. ತಾನು ಸರಿಯಾದ ದಾರಿಗುಂಟ ನಡೆಯಿಸಲ್ಪಡುತ್ತಿರು-ವನೋ ಇಲ್ಲವೆಂದು ನಿರ್ಣಯಿಸುವುದು ಆತನಿಗೆ ಕಠಿಣವಾಗುವುದು. ಸಾಕ್ಷಾ-ತ್ಕಾರದ ಬಗ್ಗೆ ತೀರ ಅಜ್ಞರಾಗಿದ್ದ ಜನರ ಮುಂದೆ ಇದೊಂದು ದೊಡ್ಡ ಸಮಸ್ಯೆಯೆ ಆಗಿದೆ. ಅನೇಕ ಧರ್ಮ ಗುರುಗಳು ನಿಮಗೆ ಬೆಳ್ಳುಳ್ಳಿ, ನೀರುಳ್ಳಿ ಅಥವಾ ಗಜ್ಜರಿಯನ್ನು ತಿನ್ನಬೇಡಿರೆಂದು ಹೇಳುತ್ತ, ಹಲವು ನಿರರ್ಥಕ ಸಾಧನಗಳನ್ನಾಗಲಿ ನೂರಾರು ಇಂಥ ಕ್ಷುಲ್ಲಕ ಸಂಗತಿಗಳನ್ನಾಗಲಿ ಅನುಸರಿ-ಸಲು ಹೇಳುತ್ತಿರುವುದನ್ನು ನೀವು ಕಾಣುವಿರಿ. ಅವು ನಿಮ್ಮನ್ನು ಸತ್ಯದ ಸಮೀಪಕ್ಕೆ ಎಂದಿಗೂ ಒಂದು ಹೆಜ್ಜೆಯಾದರೂ ಮುಂದೆ ಒಯ್ಯಲಾರವು. ಇದು ತರಬೇತಿಯೆ ಅಲ್ಲ. ಇಂಥ ಗುರುಗಳು ನಿಜವಾಗಿಯೂ ತಮ್ಮನ್ನೂ ತಮ್ಮ ಹತ್ತಿರ ಕಲಿಯುವವರನ್ನೂ ಮೋಸಗೊಳಿಸುತ್ತಿದ್ದಾರೆ. ನಿಮ್ಮ ಸಾಧನೆಯ ಸಹಜ ಪರಿಣಾಮವಾಗಿ ಆಂತರಿಕ ಶಾಂತಿ, ಮಾನಸಿಕ ಸಮಾ-ಧಾನ, ಸರಳತೆ ಮತ್ತು ಲಘುತ್ವಗಳುಂಟಾಗದಿದ್ದರೆ ನೀವು ತಪ್ಪು ದಾರಿ-ಯನ್ನು ಹಿಡಿದಿರುವಿರೆಂದೂ ನಿಮ್ಮ ತರಬೇತಿಯು ದೋಷಯುಕ್ತವಾಗಿದೆ ಯೆಂದೂ ನೀವು ನಿಶ್ಚಿತವಾಗಿ ತಿಳಿಯಿರಿ.

ಇಂದು ಬಹುಜನ ಗುರುಗಳು ಅನುಸರಿಸಿರುವ ಆಧ್ಯಾತ್ಮಿಕ ತರಬೇತಿಯ ಪದ್ಧತಿಗಳು ನಿಷ್ಠುರವಾದ ನಿಯಮಗಳ ಮೇಲೆ ನಿಂತಿವೆಯಾದ ಕಾರಣ ನಮ್ಮ ಪ್ರಾಪಂಚಿಕ ಜೀವನಕ್ಕೆ ಹೊಂದಿಕೆಯಾಗುವುದಿಲ್ಲ. ಆದುದರಿಂದ ಸಾಂಸಾರಿಕ ಜೀವನವನ್ನು ಸಾಗಿಸುವವರಿಗೆ ಅವು ಬಹುಶಃ ಅವ್ಯವಹಾರ್ಯವಾಗಿ ತೋರುವುವು. ಸಾಮಾನ್ಯವಾಗಿ ಗುರುಗಳು ಜನರಿಗೆ, ಪ್ರಾಪಂಚಿಕ ವ್ಯವಹಾರಗಳೊಂದಿಗೆ ಸಂಬಂಧ ಪಡದ ಜೀವನವನ್ನು ಸಾಗಿಸುವುದರ ಮೂಲಕ ಸಂಯಮವನ್ನು ಸಾಧಿಸುವಂತೆಯೂ, ಗಂಟೆಗಳ ಗಟ್ಟಲೆ ಭಕ್ತಿಯನ್ನಾಚರಿಸುವಂತೆಯೂ ಪ್ರೋತ್ಸಾಹಿಸುವರು. ಈ ರೀತಿಯ ತರಬೇತಿಯು ಪ್ರಪಂಚದ ಬಂಧನಗಳಿಂದ ದೂರವಿರಲು ಸಾಧ್ಯವಾಗದ, ಇಲ್ಲವೆ ಭಕ್ತಿಪರ ಅಭ್ಯಾಸಗಳಿಗೆ ಇಷ್ಟು ಸಮಯವನ್ನು ಕೊಡಲಾರದ ಸಾಮಾನ್ಯ ಜನರಿಗಾಗಿ ಅಲ್ಲವೆಂಬುದು ಸ್ಪಷ್ಟವಾಗಿದೆ. ಇದೇ ಕಾರಣದಿಂದ ಅವರ ಉಪದೇಶಗಳು ಇಷ್ಟ ಪರಿಣಾಮವನ್ನುಂಟುಮಾಡಲಾರವು; ಮತ್ತು ಜನರನ್ನು ರೂಪಿಸಲು ಅವರು ಎಷ್ಟು ಪ್ರಯತ್ನಮಾಡಿದರೂ ಯಶಸ್ವಿಯಾಗಲಾರರು. ವಸ್ತುಸ್ಥಿತಿಯೇನೆಂದರೆ, ಅವರು ಹೆಚ್ಚಾಗಿ ಶುಷ್ಕ ಪಂಡಿತರೇ ಹೊರತು ಅನುಭವಿಕರಲ್ಲ. ಮೋಕ್ಷದ ಸಲುವಾಗಿ ಪ್ರಪಂಚವನ್ನು ತ್ಯಜಿಸಲು ಜನತೆಗೆ ಎಂದಾದರೂ ಸಾಧ್ಯವಿದೆಯೆ? ಸರ್ವಥಾ ಇಲ್ಲ. ಹಾಗಾದರೆ ಜನಸಾಮಾನ್ಯರು ಅವರ ಉಪದೇಶದಿಂದ ಯಾವ ಲಾಭವನ್ನು ಪಡೆಯುವರು? ಕೆಲವರಂತೂ ಗೃಹಸ್ಥ ಜೀವನದಲ್ಲಿ ಆಧ್ಯಾತ್ಮಿಕ ಉಚ್ಚಸಿದ್ಧಿಗಳು ಸಾಧ್ಯವಿಲ್ಲವೆಂಬ ತಮ್ಮ ವಿಚಾರವನ್ನು ಧೈರ್ಯದಿಂದ ಘೋಷಿಸುವರು. ಇದರರ್ಥವಿಷ್ಟೇ: ಜನಸಾಮಾನ್ಯರಿಗೆ, ಹಲವಾರು ಬಾರಿ ಗಂಗೆಯಲ್ಲಿ ಸ್ನಾನ ಮಾಡುವುದು, ಮೀನುಗಳಿಗೆ ಹಿಟ್ಟಿನ ಗುಳಿಗೆಗಳನ್ನು ತಿನ್ನಲು ಹಾಕುವುದು, ಮತ್ತೆಮತ್ತೆ ಶಾಸ್ತ್ರಗಳನ್ನು ಓದುವುದು— ಇಂಥ ಕೆಲವು ಟೊಳ್ಳು ವಿಷಯಗಳನ್ನು ಹೇಳುವುದರ ಹೊರತು ಮತ್ತೇನನ್ನೂ ಈ ರೀತಿ ಘೋಷಿಸುವವರು ಕೊಡಲಾರರು. ನಮ್ಮೆದುರಿಗಿರುವ ನಿಜವಾದ ಸಮಸ್ಯೆಯೆಂದರೆ, ಪ್ರಪಂಚವನ್ನು ತ್ಯಜಿಸಿದ ಕೆಲವು ವಿಶಿಷ್ಟ ಜನರಿಗಷ್ಟೇ ತರಬೇತಿಗಾಗಿ ಸಾಧನಗಳನ್ನೊದಗಿಸಿಕೊಡುವುದಾಗಿರದೆ, ಈ ಜಗತ್ತಿನಲ್ಲಿ ಯಾರಿಗೆ ಭಕ್ತಿಪರ ಕಾರ್ಯಗಳೊಂದಿಗೆ ಇತರ ಅನೇಕ ಕರ್ತವ್ಯಗಳ ಕಡೆಗೂ ಲಕ್ಷ್ಯಕೊಡಬೇಕಾಗಿದೆಯೋ

ಅಂತಹ ಸಾಮಾನ್ಯ ಜನರಿಗೂ ಅವುಗಳನ್ನು ಒದಗಿಸುವುದಾಗಿದೆ. ಇಂಥ-ವರಲ್ಲಿ ಯಾರನ್ನಾದರೂ ಉಪೇಕ್ಷೆಮಾಡಿದರೆ ಅವರು ತಮ್ಮ ಕರ್ತವ್ಯವನ್ನು ಮರೆತಂತೆಯೆ. ಅವರಿಗೆ ಆಧ್ಯಾತ್ಮಿಕ ಹಾಗು ಲೌಕಿಕ ಜೀವನಗಳೆರಡೂ ಅಷ್ಟೇ ಉಜ್ಜ್ವಲವಾಗಿ ಸಾಗುವುದು ಅವಶ್ಯವಾಗಿದ್ದು, ಇದಕ್ಕಾಗಿ ನಾವು ಸರಿಯಾದ ಸಾಧನಗಳನ್ನು ಹುಡುಕಬೇಕು.

ಆದುದರಿಂದ ಜನಸಾಮಾನ್ಯರ ಆಧ್ಯಾತ್ಮಿಕ ವಿಕಾಸಕ್ಕಾಗಿ ಇಂದಿನ ಪ್ರಾಪಂಚಿಕ ಜೀವನಕ್ಕೆ ಹೊಂದಿಕೊಳ್ಳುವಂತಹ ಸರಿಯಾದ ಆಧ್ಯಾತ್ಮಿಕ ತರಬೇತಿಯು ಅಗತ್ಯವಾಗಿದ್ದು, ದುರ್ದೈವದಿಂದ ಇದುವರೆಗೂ ಅದನ್ನು ಕಡೆಗಣಿಸಲಾಗಿದೆ. ಇಂಥ ತರಬೇತಿಗಾಗಿ ಅನೇಕ ಸಂಗತಿಗಳಲ್ಲಿ ನಮಗೆ ಹೊರಗಿನ ಸಹಾಯದ ಅವಶ್ಯಕತೆಯಿರುತ್ತದೆ. ಈ ಸಹಾಯವು, ನಮ್ಮ ಭವಿಷ್ಯತ್ತನ್ನು ರೂಪಿಸುವುದರಲ್ಲಿ ಒಬ್ಬನೇ ಸಮರ್ಥ ವ್ಯಕ್ತಿಯಾದ ಗುರುವಿ-ನಿಂದ ನಮಗೆ ದೊರೆಯುವುದು. ಈ ಸಹಾಯವು ಲಭಿಸಿತೆಂದರೆ ಆಧ್ಯಾತ್ಮಿಕ ಜೀವನವು ಜಾಗೃತವಾಗಿ, ನಮ್ಮ ವಿಕಾಸಕ್ಕೆ ಬೆಂಬಲವೀಯಲು ಉಚ್ಚ ಆತ್ಮಿಕಶಕ್ತಿಗಳು ಕಾರ್ಯಪ್ರವೃತ್ತವಾಗುವುವು.

ಬೇಕಾದ ವೇಳೆಯಲ್ಲಿ ನಮ್ಮ ತೊಂದರೆಗಳನ್ನು ನಿವಾರಿಸಲು ಸಿದ್ಧ-ನಿರುವ ಮತ್ತು ನಮಗೆ ಸುಲಭವಾಗಿ ದೊರೆಯುವ, ನಮ್ಮೊಳಗಿನ ಒಬ್ಬ ಅತಿ ಶ್ರೇಷ್ಠ ತರಗತಿಯ ಸಹಬಾಂಧವನಿಂದಲೇ ಇಂಥ ಪ್ರೇರಣೆಯನ್ನು ನಾವು ಪಡೆಯಲು ಯತ್ನಿಸಬೇಕು. ದೇವತೆಗಳನ್ನು, ಉಪದೇವತೆಗಳನ್ನು, ಅಥವಾ ಮೃತರ ಆತ್ಮವನ್ನು ಗುರುವೆಂದು ತಿಳಿದು ಅವರಿಂದ ಪ್ರೇರಣೆ ಹೊಂದಲು ಯತ್ನಿಸುವ ಪದ್ಧತಿಯು ಅನೇಕವೇಳೆ ಬಹಳ ಅಪಾಯಕರವಾಗಿದೆ. ತಮ್ಮ 'ಅಂತರ್ವಾಣಿ' ಯೆಂದು ಹೇಳಿಕೊಂಡು ಅದನ್ನನುಸರಿಸುವವರ ಗತಿಯೂ ಅಂತೆಯೆ. ತಮ್ಮ ಮನಸ್ಸಿನಲ್ಲಿ ಉದ್ಭವಿಸುವ ಎಲ್ಲ ವಿವಾದಾಸ್ಪದ ಸಂಗತಿ-ಗಳಲ್ಲಿಯೂ ತಮ್ಮ ಅಂತರ್ಧ್ವನಿಯನ್ನೇ ನಿಜವಾದ ಮಾರ್ಗದರ್ಶಿಯೆಂದು ತಿಳಿದು ಅದಕ್ಕೆ ಬಹುವಾಗಿ ಪ್ರಾಶಸ್ತ್ಯಕೊಡುವ ಅನೇಕರನ್ನು ನಾನು ಬಲ್ಲೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ, ಈ ಅಂತರ್ವಾಣಿಯೆಂದು ಹೇಳಲಾದುದನ್ನು ನಂಬಿ ಕೊಂಡು ದಾರಿತಪ್ಪಿದವರ ಪ್ರತ್ಯಕ್ಷ ಉದಾಹರಣೆಗಳು ನಮಗೆ ಸಿಗುತ್ತವೆ. ನಿಜವಾಗಿಯೂ ಯಾವುದನ್ನು ಅವರು ತಮ್ಮ ಅಂತರ್ವಾಣಿಯೆಂದು ಅಥವಾ

ಮೃತರ ಆತ್ಮದ ಪ್ರೇರಣೆಯೆಂದು ತಿಳಿಯುವರೋ ಅದು ಅವರ ಅಶಿಕ್ಷಿತ ಮನಸ್ಸಿನ ಆಟವಾಗಿದೆ. ಈ ಅನಿಷ್ಟ ಪದ್ಧತಿಯನ್ನು ಕೆಲಕಾಲ ಅನುಸರಿಸಿ ದುದಾದರೆ ಅದು ಮನಸ್ಸನ್ನು ಅತಿಚುರುಕಾಗಿ ಮಾಡಿ ಅದರ ಶಕ್ತಿಯನ್ನು ಅಳತೆಯಿಲ್ಲದೆ ಹೆಚ್ಚಿಸುವುದು. ಕ್ರಮೇಣ ಅದು ತನ್ನಷ್ಟಕ್ಕೆ ತಾನೇ ಪ್ರಶ್ನೆ ಕೇಳಿ ಉತ್ತರಕೊಡಲು ಆರಂಭಮಾಡುವುದು. ಮೃತರ ಆತ್ಮಗಳೊಂದಿಗೆ ಸಂಭಾಷಿಸುವ ಈ ಶಕ್ತಿಯನ್ನು ಎಷ್ಟೋ ಸಲ ಜನರು ಯೌಗಿಕ ಸಿದ್ಧಿಯೆಂದು ತಪ್ಪಾಗಿ ಭಾವಿಸುವರು. ವಸ್ತುತಃ ಅವರು ಇದರಿಂದ ಬಹುದೂರವಿರು-ವರು. ಅಂತರ್ವಾಣಿ ಅಥವಾ ಅಂತರಾತ್ಮದ ವಾಣಿಯು ನಿಸ್ಸಂದೇಹವಾಗಿ ಎಂದಿಗೂ ಹೊಲಬುಗೆಡಿಸದಿದ್ದರೂ ಅದನ್ನು ಗ್ರಹಣಮಾಡುವಷ್ಟು ಪ್ರಗತಿ-ಹೊಂದಿದವರು ಎಷ್ಟು ಜನ ? ಅಂತರ್ವಾಣಿಯನ್ನು ಅನುಸರಿಸುವುದಾಗಿ ಹೇಳಿಕೊಳ್ಳುವ ಅನೇಕರಿಗೆ ಅದು ಕೇಳಿಸುವುದೇ ಇಲ್ಲ. ತನ್ನಷ್ಟಕ್ಕೆ ತಾನೇ ಏನುಬೇಕಾದುದನ್ನೆಲ್ಲ ನಿರ್ಮಾಣಮಾಡುವ ಮನಸ್ಸಿನ ಆಶ್ಚರ್ಯಕಾರಕ ವೃತ್ತಿಗಳಿಂದ ಅವರು ಕೇವಲ ಮರುಳುಗೊಳಿಸಲ್ಪಟ್ಟಿದ್ದಾರೆ. ಅದು ಅವರ ದೃಷ್ಟಿಗೆ ಭಯಂಕರ ಪಿಶಾಚಗಳನ್ನೂ ತೋರಬಹುದು; ಇಲ್ಲವೆ ಕಲ್ಲು–ಮರ-ಗಳಲ್ಲಿ ವಿಚಿತ್ರಧ್ವನಿಗಳು ಕೇಳುವಂತೆ ಮಾಡಬಹುದು. ಇದೆಲ್ಲವೂ ಮನಸ್ಸಿನ ಅಶಿಕ್ಷಿತ ಹಾಗು ದೂಷಿತಾವಸ್ಥೆಯೊಳಗಿನ ಕಾರ್ಯಗಳ ಮೂಲಕವಾಗಿದೆ. ಮಲ, ವಿಕ್ಷೇಪ, ಆವರಣಾದಿ ಕವಚಗಳನ್ನು ತೆಗೆದುಹಾಕಿ ಮನಸ್ಸನ್ನು ಸಂಪೂರ್ಣ ಸಾಮ್ಯಾವಸ್ಥೆ ಮತ್ತು ಮಿತತ್ವಕ್ಕೆ ತರುವವರಿಗೆ ಅಂತರ್‌ವಾಣಿಯು ಪ್ರೇರಣೆಯನ್ನಾಗಲಿ ಮಾರ್ಗದರ್ಶನವನ್ನಾಗಲಿ ಅನುಸುರಿಸುವುದು ನಿರರ್ಥಕ ವಾಗಿದೆ. ಅಂತರ್ವಾಣಿಯಿಂದಾಗಲಿ ಮೃತರ ಆತ್ಮಗಳಿಂದಾಗಲಿ ಮಾರ್ಗ-ದರ್ಶನ ಪಡೆಯುವೆವೆಂದು ಹೇಳಿಕೊಳ್ಳುವವರು ನಿಜವಾಗಿಯೂ ತಮ್ಮ ಅನಿಯಂತ್ರಿತ ಮನಸ್ಸಿನ ನಿರ್ದೇಶಗಳನ್ನೇ ಅನುಸರಿಸುತ್ತಿರುವರು. ಅದು ಕೇವಲ ಮನೋವಿಭ್ರಮ. ಈ ದುಷ್ಟಚಟವನ್ನು ನಾವು ಬೆಳೆಸಿದರೆ ಕೊನೆಯ ವರೆಗೂ ನಾಶಹೊಂದಿದಂತೆಯೆ. ಅದು ಸತತವಾದ ಮಾನಸಿಕ ಚಿಂತೆ ಮತ್ತು ಪೀಡೆಯನ್ನುಂಟುಮಾಡುವುದು. ರಾಮಚರಿತ ಮಾನಸದ ಕರ್ತೃ-ವಾದ ತುಳಸೀದಾಸನ ಆತ್ಮದೊಡನೆ ತನಗೆ ನೇರವಾದ ಸಂಬಂಧ ಬೆಳೆದಿದೆ ಯೆಂದು ಹೇಳಿಕೊಂಡು ಅತನನ್ನೇ ಗುರುವೆಂದು ಭಾವಿಸಿ ಭಕ್ತಾಗ್ರಣಿ-

ಯೊಬ್ಬನನ್ನು ನಾನು ಬಲ್ಲೆ. ಇದನ್ನು ದೊಡ್ಡ ಸಿದ್ಧಿಯೆಂದು ಭಾವಿಸಿಕೊಂಡು ಈ ವಿಷಯದಲ್ಲಿ ಕೆಲಕಾಲ ಆತನು ಹಿಗ್ಗುತ್ತ ನಡೆದನು. ತರುವಾಯ, ಆತನ ಹಾಗು ಆತನ ಸ್ವರ್ಗೀಯ ಗುರುವಿನಲ್ಲಿ ಘರ್ಷಣೆಯುಂಟಾಗತೊಡ-ಗಿತು. ಶೀಘ್ರವೇ ಅದು ತೀಕ್ಷ್ಣಕಲಹವಾಗಿ ಬೆಳೆದು ಆತನು ಸತತವಾಗಿ ಪೆಟ್ಟುತಿನ್ನಹತ್ತಿ ಮಾನಸಿಕ ಪೀಡೆಗೊಳಗಾದನು. ಆದರ ಪರಿಣಾಮವಾಗಿ ಆತನ ಸಮಚಿತ್ತತೆಯು ನಷ್ಟವಾಗಿ ಅತೀವ ದುಃಖಪಡಹತ್ತಿದನು. ಆತ-ನೊಂದಿಗೆ ಎರಡು ವರ್ಷಗಳ ಕಠಿಣ ಪರಿಶ್ರಮದ ಅನಂತರ ಆತನನ್ನು ಈ ಅನಿಷ್ಟದಿಂದ ಗುಣಪಡಿಸಲಾಯಿತು. ಆಮೇಲೆ ಅವನು ಅದೆಲ್ಲವೂ ಭ್ರಮೆ ಇಲ್ಲವೆ ಆತ್ಮವಂಚನೆಯೆಂಬುದನ್ನೂ ತಾನು ತುಳಸೀದಾಸನ ಆತ್ಮದಿಂದ ಪ್ರೇರಣೆಪಡೆಯುವುದಾಗಿ ತಿಳಿದುಕೊಂಡುದು ನಿಜವಾಗಿಯೂ ತನ್ನ ಅಶಿಕ್ಷಿತ ಮನಸ್ಸಿನ ಮಾಟವೆಂಬುದನ್ನೂ ತಿಳಿದುಕೊಳ್ಳಲು ಸಾಧ್ಯವಾಯಿತು. ಆ ದುಃಸ್ಥಿತಿಯಿಂದ ಆತನು ಮುಕ್ತನಾಗಿರುವನಾದುದರಿಂದ ಈಗ ಶಾಂತಿಸಮಾ-ಧಾನಗಳನ್ನು ಮರಳಿ ಪಡೆದಂತೆ ಅವನಿಗೆ ಅನುಭವವಾಗಹತ್ತಿದೆ. ಅಂತ-ರ್ವಾಣಿಯು ನಿಜವಾಗಿಯೂ ಪೂರ್ಣ ಪವಿತ್ರ ಸ್ಥಿತಿಯಲ್ಲಿದ್ದ ಮನಸ್ಸಿನ ಧ್ವನಿಯೆ ಆಗಿದೆ. ಮನಸ್ಸನ್ನು ಎಲ್ಲ ಕಲಂಕ ಹಾಗು ಅಪವಿತ್ರತೆಗಳಿಂದ ಶುದ್ಧ-ಗೊಳಿಸಿ ಶಾಂತ ಮತ್ತು ಸಮತ್ವದ ಸ್ಥಿತಿಗೆ ತಾರದವರೆಗೆ ಅದು ಅಂತರ್ವಾಣಿ-ಯನ್ನು ಪ್ರತಿಬಿಂಬಿಸಲಾರದು. ವಸ್ತುತಃ ಪೂರ್ಣ ಶುದ್ಧಮನಸ್ಸುಳ್ಳವನಿಗೆ ಯಾವಾಗಲೂ ಅಂತರ್ಧ್ವನಿಯೆ ನುಡಿಯುವುದಲ್ಲದೆ ತುಂಬ ವಿಕಸಿತರಾದ ಮುಕ್ತಾತ್ಮರಿಂದ ಅವನಿಗೆ ಸತತವಾಗಿ ಪ್ರೇರಣೆಯು ಹರಿದು ಬರುತ್ತದೆ. ಹೀಗೆ, ಈ ಅಭ್ಯಾಸವು ಬಹಳ ಅಪಾಯಕರವೆಂಬುದೂ ಅನೇಕ ಸಂಗತಿಗಳಲ್ಲಿ ಘೋರವಾದ ಪರಿಣಾಮಗಳನ್ನುಂಟುಮಾಡುವುದೆಂಬುದೂ ಸ್ಪಷ್ಟವಾಗಿದೆ.

ಭಗವತ್‌ಸಾಕ್ಷಾತ್ಕಾರವು, ಇದುವರೆಗೆ ಗಣಿಸಲಾದಂತೆ, ಅತ್ಯಂತ ಕಠಿಣವೂ ಅನೇಕ ಜನ್ಮಗಳ ವರೆಗಿನ ಬಹುಪರಿಶ್ರಮ ಹಾಗೂ ದೀರ್ಘ-ಪ್ರಯತ್ನಗಳಿಂದ ಲಭ್ಯವೂ ಎಂಬುದು ನಿಜವಲ್ಲ. ದೇವರು ಸರಳನಾಗಿದ್ದು ಅಷ್ಟೇ ಸರಳವಾದ ಸಾಧನಗಳಿಂದ ಪ್ರಾಪ್ಯನು. ಸಾಕ್ಷಾತ್ಕಾರಕ್ಕಾಗಿ ಗುರು-ಗಳಿಂದ ಯೋಜಿಸಲಾಗುವ ಜೀವನದ ನಿಷ್ಠುರವಾದ ನಿಯಮಗಳೂ ಆಯಾಸ-ಗೊಳಿಸುವ ಸಾಧನಗಳೂ ಈ ವಿಷಯವನ್ನು ಎಷ್ಟರಮಟ್ಟಿಗೆ ತೊಡಕಿನದಾಗಿ

ಮಾಡಿವೆಯೆಂದರೆ, ಜನರು ಅದನ್ನು ತಮ್ಮ ಯೋಗ್ಯತೆ–ಸಾಮರ್ಥ್ಯಗಳಿಗೆ ಮೀರಿದುದೆಂದು ನಂಬಲು ವಿವಶರಾಗಿದ್ದಾರೆ. ನೀವು ಮನಃಪೂರ್ವಕವಾಗಿ ನಿಮ್ಮ ಲಕ್ಷ್ಯವನ್ನು ಅತ್ತ ಹೊರಳಿಸಿದ್ದಾದರೆ ಸಾಕ್ಷಾತ್ಕಾರವು ಕಠಿಣವೇ ಅಲ್ಲ-ವೆಂದು ಭರವಸೆಕೊಡಬಲ್ಲೆ. ಗುರಿಯನ್ನು ಮುಟ್ಟಬೇಕೆಂಬ ದೃಢಸಿರ್ಧಾರ ದೊಂದಿಗೆ ಸರಿಯಾದ ಸಾಧನ ಹಾಗು ಮಾರ್ಗದರ್ಶನ-ಇಷ್ಟೇ ಪೂರ್ಣಯಶ-ಸ್ಸನ್ನು ಪಡೆಯಲು ಬೇಕಾದುದು. ಆಧ್ಯಾತ್ಮಿಕ ಪ್ರಗತಿಯಲ್ಲಿ ಅತ್ಯವಶ್ಯ-ವಾದ ಆಂತರಿಕ ಸ್ವಚ್ಛತೆ ಅಥವಾ ಚಕ್ರಗಳ ಶುದ್ಧೀಕರಣದಿಂದಲೇ ಆಧ್ಯಾ-ತ್ಮಿಕ ತರಬೇತಿಯು ಆರಂಭವಾಗುವುದು. ಈ ಪ್ರಕಾರ, ಅಧ್ಯಾತ್ಮದಲ್ಲಿ ಸರಿಯಾದ ತರಬೇತಿಯು ಆಂತರಿಕಶುದ್ಧೀಕರಣದಿಂದ ಮೊದಲಾಗುವುದು; ಮತ್ತು ಇದನ್ನು ದುರ್ಲಕ್ಷಿಸಿದ್ದಾದರೆ ಯೋಗದ ಮೂಲಕ ಪ್ರಾಪ್ತವಾದ ಸಿದ್ಧಿಗಳ ದುರುಪಯೋಗಕ್ಕೆ ಕಾರಣವಾಗುವುದು. ಈ ಶುದ್ಧಿಯನ್ನು ಸಾಧಿ ಸಲು ಹಠಯೋಗವು ಹೆಚ್ಚಾಗಿ ಶಾರೀರಿಕ ಸಾಧನೆಗಳನ್ನು ಯೋಜಿಸುವುದು. ಅವುಗಳಲ್ಲಿ ಕೆಲವಂತೂ ಅನೇಕ ಜನರಿಗೆ ತೀರ ಕಠಿಣ ಹಾಗು ತ್ರಾಸದಾಯಕ ವಾಗಿವೆ. 'ಸಹಜಮಾರ್ಗ' ಪದ್ಧತಿಯಲ್ಲಾದರೋ ಅದು ಗುರುವಿನಿಂದ ಸಂಚರಣಗೊಳಿಸಲಾಗುವ ಶಕ್ತಿಯ ಸಹಾಯದಿಂದ ಸುಲಭವಾದ ಮಾನ-ಸಿಕ ಅಭ್ಯಾಸಗಳ ಮೂಲಕ ಪಡೆಯಲಾಗುತ್ತದೆ. ಕೆಲವರು ಧರ್ಮಗುರುಗಳು, ಜನರಿಗೆ, ಅವರ ಮನಸ್ಸನ್ನು ದೈವೀವಿಚಾರಗಳಲ್ಲಿ ತೊಡಗಿಸುವುದಕ್ಕಾಗಿ, ದಿನಾಲು ಎಂಟೆಂಟು ಗಂಟೆಗಳವರೆಗೆ ಹಲವು ಯಾಂತ್ರಿಕ ಸಾಧನಗಳನ್ನನು-ಸರಿಸಲು ಆಗ್ರಹಪಡಿಸುವರು. ಮನಸ್ಸಿನ ಮೇಲೆ ಮಿತಿಮೀರಿ ಭಾರಹೊರಿ ಸುವ ಅಥವಾ ಮೆದುಳನ್ನು ಪೀಡಿಸುವ ಸಾಧನಗಳನ್ನು ಕಡ್ಡಾಯಗೊಳಿಸುವ ತರಬೇತಿಯ ರೀತಿಯನ್ನು ನಾನು ಬಲವಾಗಿ ನಿಷೇಧಿಸುತ್ತೇನೆ. ಇಂಥ ತರಬೇತಿಯ ಸ್ವಾಭಾವಿಕ ಪರಿಣಾಮವೆಂದರೆ ಮನೋವಿಕಾಸಕ್ಕೆ ಅವಕಾ-ಶವೇ ಇಲ್ಲದಂತಾಗಿ ಅನುಭವಶಕ್ತಿಯು ಕುಂಠಿತವಾಗುವುದು. ಇದು, ಒಬ್ಬ ಹುಡುಗನನ್ನು ಏಕಾಗ್ರಗೊಳಿಸಲು ಒತ್ತಾಯ ಮಾಡಿ ಆತನನ್ನು ಬಡಿದಂತಿದೆ. ಚಕ್ರಗಳ ಶುದ್ಧೀಕರಣಕ್ಕಾಗಿಯೋ ಇಲ್ಲವೆ ಮನಸ್ಸನ್ನು ರೂಪಿಸುವುದಕ್ಕಾಗಿಯೋ ಗುರುಗಳು ಸಲಹೆಕೊಡುವ ಸುದೀರ್ಘ ಹಾಗು ತ್ರಾಸದಾಯಕ ಸಾಧನಗಳನ್ನೊಳಗೊಂಡ ಕಠಿಣಪರಿಶ್ರಮವು ಹೀಗೆ, ಯಾವ

ಪ್ರಯೋಜನಕ್ಕೂ ಬಾರದು. ಈ ಕಾರ್ಯಕ್ಕಾಗಿ ನಾವು, ನಮ್ಮ ಪ್ರಗತಿ-ಯನ್ನು ಕುಂಠಿತಗೊಳಿಸುವ ತೊಡಕುಗಳನ್ನೂ ಬಂಧನಗಳನ್ನೂ ನಿವಾರಿಸ-ಬಲ್ಲ ಹಾಗು ನಮ್ಮ ಆಧ್ಯಾತ್ಮಿಕ ಜೀವನದ ರಕ್ಷಣೆಗೆ ಆಗತ್ಯವಾದ ಶಕ್ತಿಯನ್ನು ನಮ್ಮೊಳಗೆ ಸಂಚರಣಗೊಳಿಸಬಲ್ಲ ಸಮರ್ಥ ಗುರುವಿನ ಮಾರ್ಗದರ್ಶನದಲ್ಲಿ ನಮ್ಮ ಮನಃಶಕ್ತಿಯನ್ನು ಯೋಗ್ಯ ರೀತಿಯಲ್ಲಿ ಉಪಯೋಗಿಸುವೆವು. ಸುಗಮಗೊಳಿಸಲಾದ ಈ ಆಧ್ಯಾತ್ಮಿಕ ತರಬೇತಿಯ ಕ್ರಮವು, ಹೆಂಗುಸಿ-ರಲಿ ಗಂಡಸಿರಲಿ, ತರುಣನಿರಲಿ ವೃದ್ಧನಿರಲಿ, ಗೃಹಸ್ಥನಿರಲಿ ವಿರಕ್ತನಿರಲಿ– ಪ್ರತಿಯೊಬ್ಬರಿಗೂ ಅತ್ಯುಚ್ಚ ಆಧ್ಯಾತ್ಮಿಕಸಿದ್ಧಿಯು ದೊರೆಯುವಂತೆ ಮಾಡಿದೆ.

ಸರಿಯಾದ ತರಬೇತಿಯ ಆರಂಭದ ಹೆಜ್ಜೆಯೆಂದರೆ ಸಾಧಕನ ಮನಃ-ಪ್ರವೃತ್ತಿಗಳನ್ನು ಭಗವದಭಿಮುಖವಾಗಿ ತಿರುಗಿಸುವುದು. ಇದಕ್ಕಾಗಿ ಪಂಡಿತರಾದ ಧರ್ಮಗುರುಗಳು ಬಹುಶಃ ಶಾಸ್ತ್ರಗ್ರಂಥಗಳಿಂದ ಎತ್ತಿಕೊಂಡ ಶಾರೀರಿಕ ಹಾಗು ಮಾನಸಿಕ ಸಾಧನಗಳನ್ನು ಯೋಜಿಸುವರು. ಅವು-ಗಳನ್ನನುಸರಿಸಲು ಅನೇಕವೇಳೆ ಜನರಿಗೆ ಬಲು ಕಠಿಣವೆನಿಸುವುದರಿಂದ ಅವರು ಮುಂದಿನ ಪ್ರಗತಿಯಿಲ್ಲದೆ ಆರಂಭದಶೆಯಲ್ಲಿಯೆ ಅನಿಯಮಿತ ಅವ-ಧಿಯವರೆಗೆ ಉಳಿದು ಬಿಡುತ್ತಾರೆ. ಸಮರ್ಥಗುರುವು ಸ್ವಪ್ರಯತ್ನದಿಂದ ಪ್ರಾಣಾಹುತಿಯ ಬಲವನ್ನುಪಯೋಗಿಸಿ ಶಾಶ್ವತವಾದ ಹಾಗು ಆಳವಾದ ಪರಿಣಾಮವುಂಟಾಗುವಂತೆ ಮಾಡಬೇಕು. ನಮ್ಮ ಮನಸ್ಸು ಭಗವಂತನ ಕಡೆಗೆ ತಿರುಗಿದಾಗ ಸ್ವಾಭಾವಿಕವಾಗಿಯೆ ನಾವು ನಮ್ಮ ಎಲ್ಲ ಕಾರ್ಯ ಗಳಲ್ಲಿಯೂ ಆ ಶ್ರೇಷ್ಠ ಶಕ್ತಿಯೊಡನೆ ಸಂಪರ್ಕವನ್ನನುಭವಿಸತೊಡಗುತ್ತೇವೆ. ಈ ಮಾನಸಿಕ ಸ್ಥಿತಿಯು ಅಂತರ್ಯದಲ್ಲಿ ನಿರಂತರವಾಗಿ ಸ್ಥಾಪಿತವಾದಾಗ ನಾವು ಮಾಡುವ ಪ್ರತಿಯೊಂದು ಕಾರ್ಯವು ಭಕ್ತಿಯ ಅಂಗವಾಗಿ, ಇಲ್ಲವೆ ದೈವೀಸಮರ್ಪಣೆಯಾಗಿ ತೋರಿ ನಾವು ಎಲ್ಲಕಾಲದಲ್ಲಿಯೂ ದೇವರ ಸಂತತ ಸ್ಮರಣೆಯಲ್ಲಿರುವೆವು. ಶೀಘ್ರದಲ್ಲಿಯೆ ಸಾಧಕನು ಹೃದಯದಲ್ಲಿ ಆಂತರಿಕ ಕಂಪನಗಳನ್ನನುಭವಿಸ ತೊಡಗುವನು. ಇದು 'ಶಬ್ದ' ಅಥವಾ 'ಅಜಪಾ' ಎಂಬ ಆಧ್ಯಾತ್ಮಿಕ ಸ್ಥಿತಿಯ ಆರಂಭ. ನಾವು ಯೋಗ್ಯ ಮಾರ್ಗದರ್ಶನದಲ್ಲಿ ಸರಿಯಾದ ದಾರಿಯಿಂದ ಸಾಗಿದಂತೆಲ್ಲ ಅದು ತನ್ನಷ್ಟಕ್ಕೆ

ತಾನೇ ಬೆಳೆಯುತ್ತ ಹೋಗುವುದು. ಬಹಳ ಕಾಲದ ವರೆಗೆ ಬಾಹ್ಯಜಪ ವನ್ನು ಮಾಡುವ ಕೆಲಜನರು ನಿದ್ರೆಯಲ್ಲಿಯೂ ಅದು ಮುಂದುವರಿದುದನ್ನು ಕಾಣುವರು. ಇದನ್ನವರು ಅಜಪಾ ಅಥವಾ ಶಬ್ದವೆಂದು ತಪ್ಪಾಗಿ ಭಾವಿಸು ವರು. ನಿಜವಾಗಿ ಅದು ಹಾಗಲ್ಲ. ಸತತಾಭ್ಯಾಸದಿಂದ ಅವರ ಹೃದಯ ಹಾಗು ನಾಲಗೆಗಳಿಗೆ ರೂಢಿಯಾಗಿರುತ್ತದೆಯಾದುದರಿಂದ ಅವರು ಮಲಗಿ-ದಾಗಲೂ ವೈಮರೆತಾಗಲೂ ಆ ಕ್ರಿಯೆಯು ನಡೆದೇ ಇರುತ್ತದೆ. ಅವರು ಸ್ವಲ್ಪಕಾಲ ಅಭ್ಯಾಸವನ್ನು ಬಿಟ್ಟುಕೊಟ್ಟರೆ ಅದು ನಿಂತುಹೋಗುವುದು. ಇದು ಕೇವಲ ರೂಢಿಯ ಬಲದಿಂದುಂಟಾದುದೇ ಹೊರತು ನಿಜವಾದ ಅಜಪಾ ಸ್ಥಿತಿಯಲ್ಲ. ಉಚ್ಚ ಆಧ್ಯಾತ್ಮಿಕ ಸಿದ್ಧಿಯೆಂದೂ ಅನೇಕ ವರ್ಷಗಳ ಕಠಿಣ ಪರಿಶ್ರಮದಿಂದ ದೊರಕಿಸಲಾದುದೆಂದೂ ನಿಜವಾಗಿ ಭಾವಿಸಲಾದ ಅಜಪಾ-ಸ್ಥಿತಿಯು ಪ್ರಾಣಾಹುತಿಯ ಪದ್ಧತಿಯಿಂದ ಸರಿಯಾದ ತರಬೇತಿಯ ಮೂಲಕ ಕೆಲವೇ ವಾರಗಳಲ್ಲಿ— ಅದೇಕೆ, ಕೆಲವೇ ದಿನಗಳಲ್ಲಿ ಪ್ರಾಪ್ತವಾಗಬಲ್ಲುದು. ಈ ರೀತಿಯಿಂದುಂಟಾದ ಕಂಪನಗಳು ಕೆಲಕಾಲ ಹೃದಯದಲ್ಲಿದ್ದು ಅನಂತರ ಅವು ಉಳಿದ ಚಕ್ರಗಳಿಗೆ ಹರಡಿ ಕೊನೆಗೆ ದೇಹದ ಪ್ರತಿಯೊಂದು ಕಣಕ್ಕೂ ವ್ಯಾಪಿಸುವುವು. ಆಗ ಅದನ್ನು 'ಅನಾಹತ'ವೆಂದು ತಿಳಿಯಲಾಗುವುದು. ನಮ್ಮ ಸಂಸ್ಥೆಯಲ್ಲಿ ನಿಯೋಜಿತವಾದಂತೆ ಅನುಸರಿಸಲ್ಪಡಬೇಕಾದ ಸಾಧನ ಪದ್ಧತಿಯೆಂದರೆ, ಅತ್ಯಂತ ಪ್ರಯೋಜನಕಾರಿಯೂ ಪೂರ್ಣ ಯಶಸ್ಸನ್ನು ಪಡೆ-ಯಲು ಪ್ರಾಯಃ ಏಕಮೇವ ಸಾಧನವೂ ಆದ, ದಕ್ಷವಾದ ಮಾರ್ಗದರ್ಶನ-ದಲ್ಲಿ ಧ್ಯಾನವೊಂದೇ.

ಸಾಮಾನ್ಯವಾಗಿ ಜನರು ಧ್ಯಾನಸಮಯದಲ್ಲಿ ತಮ್ಮ ಮನಸ್ಸಿನಲ್ಲಿ ನುಗ್ಗುವ ಅಸಂಖ್ಯ ವಿಚಾರಗಳನ್ನು ಕುರಿತು ದೂರುವರು. ತಮ್ಮ ಮನಸ್ಸನ್ನು ತಟಸ್ಥ ಸ್ಥಿತಿಗೆ ತರುವವರೆಗೂ ತಾವು ಮಾಡುವ ಸಾಧನವು ಸಫಲವಾಗದೆಂದು ಅವರ ಎಣಿಕೆ. ಆದರೆ ಅದು ಹಾಗಲ್ಲ. ನಾವು ಧ್ಯಾನವನ್ನು ಮಾಡುತ್ತಿ-ರುವೆವೇ ವಿನಾ ಏಕಾಗ್ರತೆಯ ಅಭ್ಯಾಸವನ್ನಲ್ಲ. ಆ ಸಮಯದಲ್ಲಿ ನಾವು ನಮ್ಮ ಮನಸ್ಸಿನಲ್ಲಿ ಬರುವ ಅನ್ಯವಿಚಾರಗಳ ಕಡೆಗೆ ಲಕ್ಷ್ಯಕೊಡದೆ ಧ್ಯಾನ-ವನ್ನು ಮುಂದುವರಿಸಬೇಕು. ಎಂದಿಗೂ ವಿಶ್ರಮಿಸದ ನಮ್ಮ ಜಾಗ್ರತ ಮನಸ್ಸಿನ ಕಾರ್ಯಗಳಿಂದಾಗಿ ವಿಚಾರಗಳ ಪ್ರವಾಹವು ಬರುತ್ತದೆ. ನಮ್ಮ

ಜಾಗ್ರತ ಮನಸ್ಸು ಹರಿದಾಡುತ್ತ ಅಗಣಿತ ವಿಚಾರಗಳನ್ನು ಮಾಡುತ್ತಿದ್ದಾ-
ಗಲೂ ನಾವು ಸುಪ್ತಚೇತನದ ಮೂಲಕ ಧ್ಯಾನದಲ್ಲಿ ಮಗ್ನರಾಗಿಯೆ ಇರು-
ತ್ತೇವೆ. ಈ ಪ್ರಕಾರ ಯಾವ ದೃಷ್ಟಿಯಿಂದ ನೋಡಿದರೂ ನಮಗೆ ಹಾನಿ-
ಯಿಲ್ಲ. ಕಾಲಕ್ರಮದಲ್ಲಿ ಸಾಕಷ್ಟು ಅಭ್ಯಾಸವಾದಮೇಲೆ ಜಾಗ್ರತ
ಮನಸ್ಸೂ ರೂಪಗೊಂಡು ಸುಪ್ತಚೇತನದೊಂದಿಗೆ ಮೇಳವಾಗಿ ಕೆಲಸ
ಮಾಡಲು ಆರಂಭಿಸುವುದು. ಈ ರೀತಿಯಿಂದುಂಟಾದ ಪರಿಣಾಮವು ಆಳವೂ
ಸುದೀರ್ಘವೂ ಆಗಿರುವುದು; ಹಾಗು ಕೊನೆಗೆ ಆತ್ಮದ ಗುಣವಿಶೇಷವಾದ
ಶಾಂತತೆಯೂ ಪ್ರಬಲವಾಗುವುದು. ಕೆಲವು ಸಂಗತಿಗಳಲ್ಲಿ ಮನಸ್ಸಿನ ಸಹಜ
ಕಾರ್ಯವನ್ನು ತಡೆಯಲು ಗುರುಗಳು ಧ್ಯಾನದ ಬೈಠಕಗಳಲ್ಲಿ ತಮ್ಮ ಇಚ್ಛಾ-
ಶಕ್ತಿಯನ್ನುಪಯೋಗಿಸುವುದನ್ನು ಕಂಡಿದ್ದೇನೆ. ಇದರ ಪರಿಣಾಮವೆಂದರೆ,
ತಾತ್ಪೂರ್ತಿಕವಾದ ಮರೆವಿನ ಸ್ಥಿತಿ ಇಲ್ಲವೆ ಮೆದುಳಿನ ಕಾರ್ಯದ ತಡೆಯುಂ-
ಟಾಗುವುದು. ಸತ್ಯವಸ್ತುವಿನ ಅರಿವಿಲ್ಲದ ಹೊಸಬನಿಗೆ ಈ ಸ್ಥಿತಿಯು ತೀರ
ಆಕರ್ಷಕವಾಗುವುದಲ್ಲದೆ ಈ ಅಸಾಧಾರಣಶಕ್ತಿಯ ಪ್ರದರ್ಶನದಿಂದ ವಿಶೇಷ
ವಾಗಿ ಪ್ರಭಾವಿತನಾಗುತ್ತಾನೆ. ನನ್ನ ಅಭಿಪ್ರಾಯದಲ್ಲಿ ಇದು, ತಾವು ಗುರು
ಗಳೆಂದು ತಮ್ಮ ಮಹಿಮೆಯನ್ನು ಸ್ಥಾಪಿಸಲು ಅತ್ಯಂತ ಹೆಚ್ಚು ಶಿಷ್ಯರನ್ನು
ಆಕರ್ಷಿಸಲು ಆತುರವುಳ್ಳವರು ಮಾಡುವ ಒಂದು ಇಂದ್ರಜಾಲದ ಕ್ರಿಯೆ
ಮಾತ್ರ. ಇದು ಆತ್ಮಪ್ರಾಧಾನ್ಯವನ್ನುಳಿದು ಬೇರೆ ಯಾವ ಉದ್ದೇಶವೂ
ಇರದ ಆಧ್ಯಾತ್ಮಿಕ ಗುರುವು ಮಾಡುವ ಶಕ್ತಿಯ ದೊಡ್ಡ ದುರುಪಯೋಗ-
ವೆಂದು ನಾನು ಹೇಳುವೆನು. ಇದು ತಪ್ಪು ಪದ್ಧತಿಯಾಗಿದ್ದು ಸಾಧಕನ
ಆಧ್ಯಾತ್ಮಿಕ ಪ್ರಗತಿಗೆ ಹಾನಿಕರವಾಗಿದೆ. ಅದುಮಲ್ಪಟ್ಟ ಇಲ್ಲವೆ ತಡೆಹಿಡಿಯ-
ಲ್ಪಟ್ಟ ವಿಚಾರಗಳು ಶೀಘ್ರವಾಗಿಯೆ ಪ್ರಬಲವಾದ ಪ್ರತಿಕ್ರಿಯೆಯನ್ನು ತೋರಿ
ಇಡೀ ಆಂತರಿಕ ರಚನೆಯನ್ನೇ ಕೆಡಿಸಿಬಿಡುತ್ತವೆ. ಅಲ್ಲದೆ, ಈ ಅಭ್ಯಾಸವು
ಆಂತರಿಕ ಜಡತೆಯನ್ನೂ ಮಾನಸಿಕ ಮಾಂದ್ಯವನ್ನೂ ಉಂಟುಮಾಡುವುದು.
ದೀರ್ಘಕಾಲದ ವರೆಗೆ ಇಂಥ ಸಾಧನೆಯನ್ನನುಸರಿಸುವವನು ವಿವೇಕವನ್ನು
ಕಳೆದುಕೊಳ್ಳುವನಲ್ಲದೆ ಆತನ ಅನುಭವಸಾಮರ್ಥ್ಯವು ಕುಂಠಿತವಾಗುತ್ತದೆ.
ಕಾಲಕ್ರಮದಲ್ಲಿ ಆತನು ಸಂಪೂರ್ಣ ಕೆಟ್ಟುಹೋಗಿ ನಿಜವಾದ ಆಧ್ಯಾತ್ಮಿಕ
ತರಬೇತಿಯನ್ನು ಹೊಂದಲು ತೀರ ಅಯೋಗ್ಯನಾಗುವನು. ಮನುಷ್ಯನು

ದಿನದಿನಕ್ಕೆ ಹಗುರವಾಗುತ್ತ ನಡೆಯದಿದ್ದರೆ ಆತನು ತಪ್ಪುಬಗೆಯ ಆಧ್ಯಾತ್ಮಿಕ ತರಬೇತಿಯನ್ನು ಪಡೆಯುತ್ತಿರುವನೆಂದು ನಾವು ಊಹಿಸತಕ್ಕದ್ದು. ಮಾನಸಿಕ ಹಾಗು ಆತ್ಮಿಕ ಲಘುತ್ವದ ಸತತವಾದ ಬೆಳವಣಿಗೆಯು ಆಧ್ಯಾತ್ಮಿಕ ಪ್ರಗತಿಯ ನಿಶ್ಚಿತ ಪ್ರಮಾಣವಾಗಿದೆ.

ಈ ಪ್ರಕಾರ ಯಾವುದು ನಮ್ಮ ಮನಸ್ಸನ್ನು ಶಿಕ್ಷಿತ ಹಾಗು ನಿಯಂತ್ರಿತಗೊಳಿಸುವುದೋ, ನಮ್ಮ ಇಂದ್ರಿಯಗಳಲ್ಲಿಯೂ ಅವುಗಳ ಸಾಮರ್ಥ್ಯಗಳಲ್ಲಿಯೂ ಮಿತತ್ವವನ್ನು ನೆಲೆಗೊಳಿಸಿ ಆತ್ಮಿಕ ಲಘುತ್ವವನ್ನುಂಟುಮಾಡುವುದೋ ಅದೇ ನಿಜವಾದ ಆಧ್ಯಾತ್ಮಿಕ ತರಬೇತಿ. ಆಗ ಮಾತ್ರ ಆಂತರಿಕ ಶಾಂತಿ-ಸಮಾಧಾನಗಳು ಸುರಕ್ಷಿತವಾಗಿ, ಉಚ್ಚತರ ಸಿದ್ಧಿಯು ಶಕ್ಯವಾಗುವುದು. ಇದಕ್ಕಾಗಿ, ಪ್ರಾಣಾಹುತಿ ಶಕ್ತಿಯನ್ನು ಸ್ವಾಧೀನಪಡಿಸಿಕೊಂಡ ಉನ್ನತ ಮಟ್ಟದ ಯೋಗ್ಯ ಗುರುವಿನ ಮಧ್ಯಸ್ಥಿಕೆಯು ಅತ್ಯವಶ್ಯವಾಗಿದ್ದು, ಸಾಧಕನು ಆತನಿಗೆ ಪೂರ್ಣ ಶ್ರದ್ಧೆ–ವಿಶ್ವಾಸಗಳಿಂದ ಶರಣುಹೋಗತಕ್ಕದ್ದು.

ಕೆಲಜನರು, ತಮ್ಮ ಜೀವನದ ಸಮಸ್ಯೆಯನ್ನು ಪರಿಹರಿಸಲು ಕೇವಲ ದೀಕ್ಷೆಯೊಂದೇ ಸಾಕಾಗುವುದೆಂದು ತಿಳಿಯುವರು. ಯಾವ ರೀತಿಯಿಂದಾದರೂ ಗುರುವಿನಿಂದ ಅವರು ದೀಕ್ಷೆಯನ್ನು ಪಡೆದುದಾದರೆ ಅವರಿಗೆ ಉಳಿದ ಮುಂದಿನ ಸಾಧನೆಯ ಅಥವಾ ಅಭ್ಯಾಸದ ಅಗತ್ಯವಿಲ್ಲ. ಗುರುವಿನ ಒಂದು ಪ್ರೇರಣೆಯೆ ತಮ್ಮನ್ನು ಕೊನೆಗೆ ಸಂಸ್ಕಾರಗಳ ಹಾಗು ಮಾಯೆಯ ಬಂಧನಗಳಿಂದ ಬಿಡುಗಡೆಮಾಡಿ ಮುಕ್ತಿಯ ಕಡೆಗೆ ಒಯ್ಯುವುದೆಂದು ಅವರ ಕಲ್ಪನೆ. ಈ ಕಲ್ಪನೆಯು ಅಕ್ಷರಶಃ ಸತ್ಯವಾದರೂ ಗುರುವು ವಿಶೇಷತಃ ಅತ್ಯುಚ್ಚ ಮಟ್ಟದವನಿದ್ದು ಆತನಿಗೆ ನೀವು ಸಂಪೂರ್ಣವಾಗಿ ಶರಣಾಗತರಾಗದ ಹೊರತು ಅಷ್ಟು ಉತ್ತೇಜನಕಾರಿಯಾಗಲಿಕ್ಕಿಲ್ಲ. ನಿಸ್ಸಂದೇಹವಾಗಿ ಶಿಷ್ಯನ ಸುಧಾರಣೆ ಹಾಗು ಪ್ರಗತಿಯ ವಿಚಾರವು ಗುರುವಿನ ಹೃದಯದಲ್ಲಿ ಸದಾ ನೆಲಸಿರುವುದಲ್ಲದೆ ಅದಕ್ಕಾಗಿ ಆತನು ಸಾಧ್ಯವಾದಷ್ಟು ಪ್ರಯತ್ನಿಸುವನಾದರೂ ನಾವು ಏನನ್ನೂ ಮಾಡದೆ ಸೋಮಾರಿಗಳಾಗಿ ನಮ್ಮ ಪಾಲಿನ ಕೆಲಸವನ್ನು ಕೂಡ ಆತನ ಮೇಲೆ ಹೊರಿಸಬೇಕೆಂದು ಇದರರ್ಥವಲ್ಲ. ನಮಗಾಗಿ ಆತನು

ವೃಥಾ ಶ್ರಮವಹಿಸದಂತೆ ನೋಡಿಕೊಂಡು ನಮ್ಮ ಪ್ರಗತಿಗಾಗಿ ಶಕ್ಯವಿದ್ದಷ್ಟು ದುಡಿಯುತಕ್ಕದ್ದಲ್ಲದೆ ನಮಗೆ ಸೇರಿದ ಈ ಕರ್ತ್ತವ್ಯವನ್ನು ಎಂದಿಗೂ ಕಡೆಗಣಿಸಬಾರದು.

ಬಹುಜನ ಧರ್ಮಗುರುಗಳು ಸಾಧಕನಲ್ಲಿ ಕೆಲವು ಆಧ್ಯಾತ್ಮಿಕ ಸ್ಥಿತಿಗಳನ್ನು ವಿಕಸಿತಗೊಳಿಸಲು ಕೃತ್ರಿಮ ಸಾಧನಗಳನ್ನು ಅನುಸರಿಸುವರು. ಆದರೆ ಅದು ತುಂಬ ದೋಷಯುಕ್ತವಾದ ಪದ್ಧತಿ. ಉದಾಹರಣೆಗಾಗಿ, ಜ್ಞಾನವನ್ನು ರೂಢಿಸಿಕೊಳ್ಳಲು ಹಾಗು ಸಾಧಕನಲ್ಲಿ 'ಅಹಂ ಬ್ರಹ್ಮಾಸ್ಮಿ'ಯ ಸ್ಥಿತಿಯನ್ನುಂಟುಮಾಡಲು ಅವರು ಬಾಹ್ಯಧ್ಯಾನವನ್ನುಪದೇಶಿಸಿ ಅದನ್ನೇ ಯಾವಾಗಲೂ ಚಿಂತಿಸುತ್ತಿರುವಂತೆಯೂ ಪ್ರತಿಕ್ಷಣ ಅವೇ ಶಬ್ದಗಳನ್ನುಚ್ಚರಿಸುವಂತೆಯೂ ಹೇಳಿಕೊಡುವರು. ಇದು ಯಾಂತ್ರಿಕ ಕ್ರಿಯೆಯಾಗಿದ್ದು ಆಂತರಿಕ ಜಡತೆಯನ್ನುಂಟುಮಾಡುತ್ತದೆ. ಇಂಥ ಕೃತ್ರಿಮ ಸಾಧನಗಳಿಂದ 'ಅಹಂ ಬ್ರಹ್ಮಾಸ್ಮಿ'ಯ ನಿಜವಾದ ಸ್ಥಿತಿಯು ಎಂದಿಗೂ ಉಂಟಾಗದು. ಶಬ್ದಗಳ ಪದೇಪದೇ ಪುನರುಚ್ಚಾರಣೆಯು ಆತನ ನಾಲಗೆಗೆ ರೂಢಿಯನ್ನುಂಟುಮಾಡುವುದರಿಂದ ಪ್ರತಿಕ್ಷಣವೂ ಅವೇ ಶಬ್ದಗಳು ಆತನ ಬಾಯಿಂದ ಬರುವುವು. ಆದರಿಂದ ಆತನು ನಿಜವಾಗಿಯೂ ಜ್ಞಾನಿಯಾಗಿರುವನೆಂದು ತಿಳಿಯುವುದು ಶುದ್ಧ ತಿಳಿಗೇಡಿತನ. ಅವರು ನೂರಾರು ಸಲ ಆ ಶಬ್ದಗಳನ್ನುಚ್ಚರಿಸಬಹುದು; ಪ್ರತಿಯೊಂದು ಪದಾರ್ಥವೂ ಬ್ರಹ್ಮವೆಂದು ತಿಳಿಯಲು ಪ್ರತಿಕ್ಷಣವೂ ಒತ್ತಾಯದಿಂದ ವಿಚಾರಮಾಡಬಹುದು; ಆದರೂ ಅವರು ಆ ಸ್ಥಿತಿಯಿಂದ ಎಂದಿನಂತೆಯೆ ಬಹುದೂರವಿರುವರು. ಈ ಅಭ್ಯಾಸವು ಆತನ ಸುತ್ತಲೂ ಕೃತ್ರಿಮ ವಾತಾವರಣವನ್ನುಂಟುಮಾಡುವುದಲ್ಲದೆ ಆ ವಾತಾವರಣವು ಅದನ್ನೇ ಬಾಹ್ಯವಾಗಿ ಕಲ್ಪಿಸಲು ಆತನಿಗೆ ಸಹಾಯಮಾಡುವುದು. ಈ ಶಬ್ದಗಳನ್ನು ಮತ್ತೆ ಮತ್ತೆ ಉಚ್ಚರಿಸುವ ಅಭ್ಯಾಸವನ್ನು ಬಿಟ್ಟುಕೊಟ್ಟರೆ ಈ ಸ್ಥಿತಿಯು ಮಾಯವಾಗುವುದು. ಆದುದರಿಂದ 'ಅಹಂ ಬ್ರಹ್ಮಾಸ್ಮಿ'ಯ ಸ್ಥಿತಿಯುಂಟಾಗಿದೆಯೆಂಬ ಭಾವನೆಯು ವಸ್ತುತಃ ನಿಜವಾಗಿರದೆ ಕೇವಲ ಕಾಲ್ಪನಿಕ ಹಾಗು ಭ್ರಾಮಕವೆಂಬುದು ಸ್ಪಷ್ಟವಾಗಿದೆ. ಅಲ್ಲದೆ, ಸಾಮಾನ್ಯವಾಗಿ ಭಾವಿಸಲಾದಂತೆ 'ಅಹಂ ಬ್ರಹ್ಮಾಸ್ಮಿ'ಯ ನಿಜವಾದ ಸ್ಥಿತಿಯು ಕೂಡ ಅಷ್ಟೇನೂ ಉಚ್ಚವಾದುದಲ್ಲ. ಈ ಹಂತದಲ್ಲಿ ಮನುಷ್ಯನು ಮಾಯಾಜಾಲ

ದಿಂದ ಸ್ವಲ್ಪಮಟ್ಟಿಗೆ ಬಿಡುಗಡೆಹೊಂದಿದರೂ ಅದರ ಎಲ್ಲೆಯು ಪೂರ್ಣ ಆಚೆಗೆ ಹೋಗಿರುವುದಿಲ್ಲ. ಜಡತ್ವದ ಬಹು ಸೂಕ್ಷ್ಮರೂಪವೇ ಆದರೂ ಅಹಂ-ಕಾರವು ಈ ಮಟ್ಟದಲ್ಲಿ ಇನ್ನೂ ಇರುವುದು. ಇದುವೆ ಜ್ಞಾನದ ಅತ್ಯುಚ್ಚ ಪ್ರಕಾರವೆಂದೂ ಇದರಾಚೆಗೆ ಸಂಪಾದಿಸಬೇಕಾದುದೇನೂ ಇಲ್ಲವೆಂದೂ ಯಾರು ವೇದಿಕೆಯ ಮೇಲಿಂದ ಉಪದೇಶಿಸುವರೋ ಅವರು ಬಹಳ ತಪ್ಪಾಗಿ ತಿಳಿದಿದ್ದಾರೆ. ಅದು ನಮ್ಮ ಗಂತವ್ಯವಾಗಿರದೆ ಮುಂದಿನ ಮಜಲನ್ನು ಹತ್ತಲು ಕೇವಲ ಅದನ್ನು ದಾಟುವೆವು. ಅದನ್ನೇ ಸತ್ಯವಸ್ತುವೆಂದಾಗಲಿ ಅಂತಿಮ ಗುರಿಯೆಂದಾಗಲಿ ತಿಳಿದು ಅದಕ್ಕೆ ಅಂಟಿಕೊಳ್ಳುವವರು ದೊಡ್ಡ ತಪ್ಪನ್ನು ಮಾಡುತ್ತಿದ್ದಾರೆ. ಎಲ್ಲಿ 'ನಾನು' ಎಂಬ ಭಾವನೆಯ ಸಹಿತವಾಗಿ ಎಲ್ಲವೂ ಕೊನೆಗೊಳ್ಳುವುದೋ ಆ ಸ್ಥಿತಿಗೆ ನಾವು ಕಟ್ಟಕಡೆಗೆ ಬರ ಬೇಕಾಗಿದೆ.

ಹೀಗಿದೆ, ನಾವು ಕೊನೆಗೆ ಪಡೆಯಬೇಕಾದ ಪೂರ್ಣ ಆತ್ಮನಿರಸನದ ಸ್ಥಿತಿ. ಅಲ್ಲಿ 'ಅಹಂ' ಎಂಬ ಧ್ವನಿಯು ತೀರ ಅಪಸ್ವರವಾಗುವುದು. 'ಅಹಂ ಬ್ರಹ್ಮಾಸ್ಮಿ'ಯ ಸ್ಥಿತಿಯು ಮೂಲತಃ ಚೇತನತೆಯಿಂದ ವೈದೋರಿ ನಾವು ಯೋಗ್ಯ ಮಾರ್ಗದರ್ಶನದಲ್ಲಿ ದಾರಿಗುಂಟ ಮುಂದುವರಿದಂತೆಲ್ಲ ಅದು ನಮ್ಮೊ-ಳಗೆ ತನ್ನಿಂದ ತಾನೇ ಬೆಳೆಯುತ್ತ ಹೋಗುವುದು. ಅದು ಒಳಗೆ ಕಂಪನ ಗಳನ್ನು ಹುಟ್ಟಿಸುವುದರ ಪರಿಣಾಮವಾಗಿ ಮನಸ್ಸು ಅವುಗಳಿಗೆ ಮರುದನಿ-ಗೊಡುವುದು. ಮನಸ್ಸಿನ ಈ ಸ್ಥಿತಿಯು ಆಧ್ಯಾತ್ಮಿಕ ಪ್ರಗತಿಯ ಪ್ರತಿ ಯೊಂದು ಹೆಜ್ಜೆಯಲ್ಲಿಯೂ ಮೂರು ರೂಪಗಳಲ್ಲಿ ಕಾಣಿಸಿಕೊಳ್ಳುವುದು: 'ಅಹಂ ಬ್ರಹ್ಮಾಸ್ಮಿ' ( ನಾನು ಬ್ರಹ್ಮ ); 'ಸರ್ವಂ ಖಲ್ವಿದಂ ಬ್ರಹ್ಮ' (ಎಲ್ಲವೂ ಬ್ರಹ್ಮ); 'ಸರ್ವಂ ಬ್ರಹ್ಮಣಃ' (ಎಲ್ಲವೂ ಬ್ರಹ್ಮನಿಂದ). ವಸ್ತುತಃ ಮೂರು ರೂಪಗಳಲ್ಲಿಯ ಈ ಸಮಗ್ರ ಸ್ಥಿತಿಯು ವಿವಿಧತೆಯಲ್ಲಿಯೂ ಒಂದೇ ಆಗಿದೆ. ಅದು ಪಿಂಡದೇಶದಲ್ಲಿ ಸ್ಥೂಲರೂಪದಿಂದ ಕಾಣಿಸಿಕೊಳ್ಳುವುದು; ಬ್ರಹ್ಮಾಂಡ ಮಂಡಲದಲ್ಲಿ ಹೆಚ್ಚು ಸೂಕ್ಷ್ಮವಾಗುವುದು. ಈ ಎಲ್ಲ ಸ್ಥಿತಿಗಳೂ ಎರಡ-ನೆಯ ಅಧ್ಯಾಯದಲ್ಲಿ ತೋರಿಸಲಾದ ರೇಖಾಚಿತ್ರದ ಹದಿನಾರು ವೃತ್ತಗಳಲ್ಲಿ ಮೊದಲನೆಯದರಲ್ಲಿಯೆ ಕೊನೆಗೊಳ್ಳುವುವು.

ಆದುದರಿಂದ ಅಧ್ಯಾತ್ಮದ ಸಾಧಕನು ಯೋಗ್ಯನಾದ ಗುರುವಿನ

ನೇತೃತ್ವದಲ್ಲಿ ಸಾಕ್ಷಾತ್ಕಾರದ ಪಥದ ಮೇಲೆ ತೀರ ಸಹಜಗತಿಯಲ್ಲಿ, ಆಂತರಿಕ ಶುದ್ಧತೆಯ ಕಡೆಗೆ, ಅರ್ಥಾತ್ ಚಕ್ರಗಳ ಶುದ್ಧೀಕರಣದ ಕಡೆಗೆ-ಗಮನ ಕೊಡುತ್ತ ಇಂದ್ರಿಯಗಳ ಹಾಗು ಇತರ ಶಕ್ತಿಗಳ ಕಾರ್ಯದಲ್ಲಿ ಪೂರ್ಣ ಮಿತತ್ವದಿಂದ ಮುಂದುವರಿಯುವುದೇ ಸರಿಯಾದ ತರಬೇತಿಯಾಗಿದೆ.

---

## ಅಧ್ಯಾಯ: ೬

# ಶ್ರದ್ಧೆ

ಸಂಕಲ್ಪ, ಶ್ರದ್ಧೆ ಹಾಗೂ ವಿಶ್ವಾಸ— ಇವು ಮೂರು ಸಾಕ್ಷಾತ್ಕಾರದ ದಾರಿಯಲ್ಲಿ ಯಶಸ್ಸನ್ನು ಸುಗಮಗೊಳಿಸಲು ಸಹಾಯಮಾಡುವ ಪ್ರಾಥಮಿಕ ಸಂಗತಿಗಳಾಗಿವೆ. ಸತ್ಯವಸ್ತುವನ್ನು ಪಡೆಯುವ ದೃಢಸಂಕಲ್ಪವೆಂದರೆ ನಾವು ಆತ್ಮವನ್ನು ಗುರುತಿಸುವ ವಿಚಾರದಲ್ಲಿ ನಮ್ಮ ಅಂತಃಕರಣದಲ್ಲಿ ಜಾಗ್ರತರಾದಂತೆಯೆ. ಈ ವಿಚಾರದಿಂದ ನಾವು ಮುಂದುವರಿದು ದಾರಿಯನ್ನು ಆರಿಸಿಕೊಳ್ಳುವೆವು. ನಾವು ಗಂಭೀರವಾಗಿ ನೋಡಬೇಕಾದ ಮೊದಲನೆಯ ಸಂಗತಿಯೆಂದರೆ, ನಾವು ಆರಿಸಿಕೊಳ್ಳುವ ದಾರಿಯು ನೇರವಾಗಿ ಗುರಿಯ ಕಡೆಗೆ ಒಯ್ಯಲು ತಕ್ಕುದಾಗಿರಬೇಕು. ಆದುದರಿಂದ ನಮ್ಮ ಮನಸ್ಸಿನಲ್ಲಿ ಅಂತಿಮ ಗುರಿಯ ಬಗೆಗೆ ನಿಶ್ಚಿತವಾದ ಹಾಗು ನಿಚ್ಚಳವಾದ ಕಲ್ಪನೆಯನ್ನಿಟ್ಟುಕೊಳ್ಳುವುದು ಅಗತ್ಯವಾಗಿದೆ. ಈಗ, ಬೇರೆಬೇರೆ ಜನರು ಅನೇಕವಿಧದಲ್ಲಿ ಬೇರೆಬೇರೆ ಅಂತಿಮಗುರಿಯನ್ನು ಇಟ್ಟುಕೊಂಡಿರುವುದರಿಂದ ಅದನ್ನು ಹೊಂದುವ ಸಾಧನಗಳಾದರೂ ಬೇರೆಬೇರೆಯಾಗಿವೆ. ಹೀಗೆ ನಾವು ಅಪೇಕ್ಷಿತ ಗುರಿಯತ್ತ ನೇರವಾಗಿ ಒಯ್ಯುವ ಸರಿಯಾದ ದಾರಿಯನ್ನು ಆರಿಸಿಕೊಳ್ಳಬೇಕಾಗುವುದು. ಈ ವಿಷಯದಲ್ಲಿ ಅವಸರದ ನಿರ್ಣಯವು ಅನೇಕವೇಳೆ ನಿರಾಶಾದಾಯಕ ಪರಿಣಾಮಗಳನ್ನುಂಟುಮಾಡುವುದು. ಏಕೆಂದರೆ, ನೀವು ಒತ್ತಾಯಕ್ಕೊಳಗಾಗಿ ಅನುಸರಿಸಿರುವ ದಾರಿಯು ನಿಮ್ಮ ಗಂತವ್ಯದ ಕಡೆಗೆ ನಿಮ್ಮನ್ನು ಕರೆದೊಯ್ಯಲು ತಕ್ಕುದಾಗಿರಲಿಕ್ಕಿಲ್ಲ. ಎಷ್ಟೋ ಸಲ ನೀವು ತಪ್ಪು ದಾರಿಯನ್ನನುಸರಿಸುವುದರಿಂದ ನಿಜವಾದ ವಸ್ತುವು ಕಣ್ಮರೆಯಾಗಿ ತಪ್ಪು ಗ್ರಹಿಕೆಗಳೂ ಭ್ರಮೆಯೂ ಉಂಟಾಗುವುವು. ನೀವು ಆದೇ ದಾರಿಯಲ್ಲಿಯೆ ಮುಂದುವರಿದುದಾದರೆ ಕೊನೆಗೆ ಸತ್ಯವಸ್ತುವಿನ ಪ್ರಾಪ್ತಿಯು ಅಶಕ್ಯವಾಗುವದು. ದುರ್ದೈವದಿಂದ ನೀವು ತಪ್ಪು ಮಾರ್ಗದರ್ಶನ ಹಾಗು ದೋಷಯುಕ್ತ ತರಬೇತಿಗೊಳಗಾದಾಗ ಬಹುಶಃ ಹೀಗಾಗುವುದು. ಆದುದ-

ರಿಂದ ಸಾಕ್ಷಾತ್ಕಾರಕ್ಕಾಗಿ ನೀವು ಆರಿಸಿಕೊಂಡ ದಾರಿಯು ನಿಜವಾಗಿಯೂ ಸರಿಯಾದುದೆಂಬುದನ್ನು ಪ್ರಾರಂಭದಲ್ಲಿಯೆ ಪ್ರತಿಯೊಂದು ರೀತಿಯಿಂದಲೂ ಪರೀಕ್ಷಿಸುವುದು ಅತ್ಯಗತ್ಯವಾಗಿದೆ. ಯಾವುದಾದರೊಂದು ಮಾರ್ಗವನ್ನು, ಅದು ಕೇವಲ ಹಳೆಯದೆಂಬ ಕಾರಣದಿಂದ ಅನುಸರಿಸಬೇಡಿರಿ. ಏಕೆಂದರೆ, ಆ ಹಳೆಯ ಮಾರ್ಗವು ಪ್ರಪಂಚದ ಹಾಗು ಸಮಾಜದ ಬದಲಾಯಿಸಿದ ಪರಿಸ್ಥಿತಿಗಳಿಗೆ ಸರಿಹೊಂದದೆ ಇರಬಹುದು. ಬಹುಸಂಖ್ಯಾಕ ಜನರು ಅನುಸರಿಸುವರೆಂಬ ಕಾರಣದಿಂದಲೂ ಯಾವುದಾದರೊಂದು ದಾರಿಯನ್ನು ಹಿಡಿಯಬೇಡಿರಿ. ಏಕೆಂದರೆ, ಬಹುಸಂಖ್ಯಾಕರು ಯಾವಾಗಲೂ ಸರಿಯಾದ ದಾರಿಯಲ್ಲಿರುವರೆಂಬ ನಿಯಮವಿಲ್ಲ. ಪ್ರಾಯಃ ಅವರು, ಸ್ವತಃ ತಪ್ಪು ಮಾರ್ಗದರ್ಶನಕ್ಕೊಳಗಾದ ಕೆಲ ಜನರನ್ನು ಅನುಸರಿಸುತ್ತಿರಬಹುದು. ಒಂದು ಪದಾರ್ಥದ ಗುಣಗಳನ್ನು ನಾವು ನಮ್ಮಲ್ಲಿರುವ ಎಲ್ಲ ಸಾಧನಗಳನ್ನೂ ಉಪಯೋಗಿಸಿ ತುಂಬ ಜಾಗರೂಕತೆಯಿಂದ ಪರೀಕ್ಷಿಸಬೇಕು. ಬುದ್ಧಿ ಮತ್ತು ಅನುಭವಗಳ ಸಹಾಯದಿಂದ ಯೋಗ್ಯ ವಿವೇಚನೆ ಹಾಗು ಪರೀಕ್ಷಣಗಳಿಲ್ಲದೆ ನಾವು ಒಮ್ಮೆಲೆ ಯಾವುದೊಂದು ನಿರ್ಣಯಕ್ಕೆ ಬರಬಾರದು. ಆ ಪದಾರ್ಥದ ಗುಣಗಳ ಬಗ್ಗೆ ನಮಗೆ ಕೊನೆಯದಾಗಿ ಮನವರಿಕೆಯಾದ ಮೇಲೆ ಶ್ರದ್ಧೆ ಹಾಗು ನಿಷ್ಠೆಯಿಂದ ಅದಕ್ಕೆ ಅಂಟಿಕೊಳ್ಳಬಹುದು. ಈ ರೀತಿಯಿಟ್ಟ ಶ್ರದ್ಧೆಯು ನಿಜವಾದುದೂ ಕೊನೆಯುವರೆಗೆ ಉಳಿಯುವಂತಹದೂ ಆಗಿರುತ್ತದೆ. ಇದಕ್ಕೆ ವಿರುದ್ಧವಾಗಿ, ತೋರಿಕೆಯ ಆಕರ್ಷಣೆಗಳಿಂದಾಗಲಿ ಕ್ಷುಲ್ಲಕವಾದ ಭೌತಿಕ ಸಿದ್ಧಿಗಳ ಪ್ರದರ್ಶನದಿಂದಾಗಲಿ ಸಂಪಾದಿಸಲಾದ ಶ್ರದ್ಧೆಯು ಶ್ರದ್ಧೆಯೆ ಅಲ್ಲ. ಅದು ಬಲಾತ್ಕಾರ ಮಾತ್ರ. ಅದಕ್ಕೆ ಭದ್ರವಾದ ತಳಹದಿಯಿರುವುದಿಲ್ಲವಾದುದರಿಂದ ಸಾಮಾನ್ಯವಾದ ಪ್ರತಿಕೂಲ ಪರಿಸ್ಥಿತಿಗಳಲ್ಲಿ ಮಾಯವಾಗಿ ಬಿಡುತ್ತದೆ.

ಸ್ಥೂಲವಾದ ಭೌತಿಕರೂಪಗಳ ಮೂರ್ತಿಪೂಜೆಯೂ, ಆಕಾರ, ಸಂಕೇತ ಹಾಗು ವಿಧಿಗಳ ಉಗ್ರವಾದ ಅವಲಂಬನವೂ ನಿಜವಾದ ಶ್ರದ್ಧೆಯನ್ನು ಹುಟ್ಟಿಸುವುದಿಲ್ಲ. ಅದನ್ನನುಸರಿಸುವವರ ಹೃದಯದಲ್ಲಿ ದುರಾಗ್ರಹವನ್ನು ಹುಟ್ಟಿಸುವ ಕೇವಲ ಭೌತಿಕತೆಯು ಬೆಳೆಯುವುದೇ ಹೊರತು ನಿಜವಾದ ಶ್ರದ್ಧೆಯು ಬೆಳೆಯುವುದಿಲ್ಲ. ಅವುಗಳ ಅತ್ಯಾಗ್ರಹಪಡಿಸಿದುದರಲ್ಲಿ

ಸ್ವಂತದ ವಿವೇಚನೆ, ನಿರ್ಣಯಗಳನ್ನು ಕೈಕೊಳ್ಳದೆ ಕುರುಡು ನಂಬುಗೆಯು-ನ್ನಿಡುವರು; ಮತ್ತು ಎರಡನೆಯ ದಾರಿಯ ಬಗ್ಗೆ ಸ್ವಲ್ಪಾದರೂ ಯೋಚನೆ ಮಾಡಲು ಇಷ್ಟಪಡುವುದಿಲ್ಲ. ಸತ್ಯದ ಸಮೀಪಕ್ಕೆ ನೇರವಾಗಿ ಒಯ್ಯುವ ಹಲವು ಅನ್ಯ ಸಾಧನಗಳ ಪ್ರಭಾವವನ್ನು ಜನರು ಒಪ್ಪಿಕೊಂಡರೂ ಅವರು ಅವುಗಳನ್ನನುಸರಿಸಲು ಸಿದ್ಧರಿಲ್ಲದಿರುವುದು ನನಗೆ ಕಂಡುಬಂದಿದೆ. ಇದಕ್ಕೆ ಕಾರಣವೆಂದರೆ ಅವರೇ ಹೇಳುವಂತೆ, ತಾವು ಮೊದಲೇ ಸ್ವೀಕರಿಸಿದ ಮಾರ್ಗವನ್ನು ಬಿಟ್ಟುಕೊಡಲು ಅವರಿಗೆ ಸಾಧ್ಯವಾಗುವುದಿಲ್ಲ. ನಿಜಾಂಶ-ವೆಂದರೆ, ಅವರಿಗೆ ಕೇವಲ ಆಕಾರ, ಸಂಕೇತಗಳಲ್ಲಿ ಮಾತ್ರ ನಂಬುಗೆಯಿರು-ವುದಲ್ಲದೆ ಸತ್ಯವಸ್ತುವಿನಲ್ಲಿ ಶ್ರದ್ಧೆಯಿರುವುದಿಲ್ಲ. ಇದನ್ನು ದುರಾಗ್ರಹವೆಂದೇ ಹೇಳಬಹುದು. ಇದರರ್ಥವಿಷ್ಟೇ: ಅವರ ದೃಷ್ಟಿಯು ಸಂಕುಚಿತವಾಗಿದ್ದು ಸತ್ಯವನ್ನರಸಲು ಅವರು ಎತ್ತರಕ್ಕೇರಲಾರರು. ಅವರ ಪ್ರಗತಿಯು ಮುಗಿ-ದಂತಾಗಿ ಕೊನೆಯ ವರೆಗೂ ಅವರು ಅದೇ ಪರಿಮಿತವಾದ ವಲಯದಲ್ಲಿಯೆ ಉಳಿಯುವರು. ಈ ರೀತಿ, ನಾವು ಮೇಲೇರುವುದನ್ನು ಯಾವುದು ತಡೆಗಟ್ಟು-ವುದೋ ಅದನ್ನು ಶ್ರದ್ಧೆಯೆನ್ನಲಾಗುವುದಿಲ್ಲ. ಆದುದರಿಂದ ಪ್ರತಿಯೊಬ್ಬನೂ ಕೇವಲ ಸತ್ಯದ ಕಡೆಗೆ ಶ್ರದ್ಧೆಯಿಂದ ಲಕ್ಷ್ಯವನ್ನಿಟ್ಟು ಆತ್ಮಸಾಕ್ಷಾತ್ಕಾರಕ್ಕೆ ಸಹಾಯಕವಾಗುವ ಮಾರ್ಗವನ್ನನುಸರಿಸುವುದು ಅಗತ್ಯವಾಗಿದೆ. ಮುಂದೆ, ನಾವು ಸೃಷ್ಟಿಯ ಆರಂಭದಲ್ಲಿ ಯಾವ ಶುದ್ಧರೂಪದಲ್ಲಿದ್ದೆವೋ ಆ ಕೊನೆಯ ಬಿಂದುವಿನ ಕಡೆಗೆ ಸಾಗುವೆವು. ಅದಕ್ಕಾಗಿ ನಾವು ನಮ್ಮ ಸಂಸ್ಕಾರಗಳ, ಮಾಯೆ ಮತ್ತು ಅಹಂಕಾರಗಳ ರೂಪದಲ್ಲಿದ್ದ ಆಸ್ತಿಯನ್ನೆಲ್ಲ ತ್ಯಜಿಸಿ ಹೆಜ್ಜೆ ಹೆಜ್ಜೆಗೂ ಹಗುರವಾಗುತ್ತ ಹೋಗಬೇಕಾಗುವುದು. ಸ್ಥೂಲರೂಪಗಳ ಪೂಜೆಯಿಂದುಂಟಾದ ಮನಸ್ಸಿನ ಭಾರ ಅಥವಾ ಆಂತರಿಕ ಜಡತೆಯು ನಮ್ಮ ಆಧ್ಯಾತ್ಮಿಕ ಪ್ರಗತಿಯಲ್ಲಿ ಬಾಧಕವಾಗಿದ್ದು ಅದನ್ನು ದೂರಮಾಡ ಬೇಕು. ಹೆಚ್ಚು ಹೆಚ್ಚು ಉಗ್ರತೆಯಿಂದ ಅದನ್ನು ಪೋಷಿಸುತ್ತ ಹೋದು-ದಾದರೆ ಅವರು ಜಡತೆಯ ಹಾಗು ವಂಚನೆಯ ಮುಳ್ಳುಕಂಟಿಯಲ್ಲಿ ಸಿಕ್ಕಿ-ಬಿದ್ದು ಶಾಶ್ವತಾನಂದದ ಕ್ಷೇತ್ರದಿಂದ ಬಹುದೂರ ಉಳಿಯುವರು.

ಆಧ್ಯಾತ್ಮಿಕ ಜೀವನದಲ್ಲಿ ಮುಖ್ಯವಾದ ಎರಡನೆಯ ಅಂಶವೆಂದರೆ ಗುರುವಿನಲ್ಲಿ ಶ್ರದ್ಧೆ. ಏಕೆಂದರೆ, ನಾನು ಮೊದಲೇ ಹೇಳಿದಂತೆ ಉನ್ನತ

ವಾದ ಆಧ್ಯಾತ್ಮಿಕಸಿದ್ಧಿಯಲ್ಲಿ ಸಮರ್ಥ ಗುರುವಿನ ಸಹಾಯವು ತೀರ ಅಗತ್ಯ ವಾಗಿದೆ. ಕೇವಲ ಆತನ ಮೂಲಕವೇ ಸಾಧಕನಿಗೆ ದೈವೀ ಪ್ರೇರಣೆಯು ಬರುವುದು. ಆದುದರಿಂದ ನಾವು ಆರಿಸಿಕೊಳ್ಳುವ ಮಾರ್ಗದರ್ಶಿಯು ಅತ್ಯಂತ ಸಮರ್ಥನೂ ಪ್ರಾಯೋಗಿಕ ಸಿದ್ಧಿಗಳನ್ನುಳ್ಳವನೂ ಆಗಿರುವುದು ಅವಶ್ಯ ವಾಗಿದೆ. ಮಾರ್ಗದರ್ಶಿಯ ನಿಜವಾದ ಯೋಗ್ಯತೆಯನ್ನು ಕಂಡುಹಿಡಿಯಲು ನಾವು ಆತನೊಂದಿಗೆ ಕೆಲಕಾಲವಿದ್ದು ನಮ್ಮ ಅಳವಿನೊಳಗಿನ ಎಲ್ಲ ಸಾಧನ ಗಳಿಂದಲೂ ಆತನನ್ನು ಪರೀಕ್ಷಿಸಬೇಕು. ಬುದ್ಧಿ ಹಾಗು ಅನುಭವಗಳಿಂದ ಆತನ ಸಾಮರ್ಥ್ಯಗಳ ಬಗ್ಗೆ ನಮಗೆ ಮನವರಿಕೆಯಾದ ಮೇಲೆ ಆತನನ್ನು ಗುರುವೆಂದು ಸ್ವೀಕರಿಸಿ ಆತನ ಮಾರ್ಗದರ್ಶನಕ್ಕೊಳಗಾಗಬೇಕು. ಈ ತತ್ತ್ವವನ್ನು ನಾವು ದುರ್ಲಕ್ಷಿಸಿದ್ದಾದರೆ ನಮ್ಮ ನಿರ್ಣಯದಲ್ಲಿ ನಾವು ಮೋಸ ಹೋಗುವ ಸಂಭವವಿದೆ. ನಾವು ಯಾರೊಬ್ಬರ ಪಾಂಡಿತ್ಯ ಪ್ರದರ್ಶನ-ದಿಂದಾಗಲಿ ಹೊರಗಿನ ಭವ್ಯತೆಯಿಂದಾಗಲಿ ಆಕೃಷ್ಟರಾಗಿ ಕುರುಡರಂತೆ ಅವರನ್ನನುಸರಿಸಬಾರದು. ಒಬ್ಬ ಮನುಷ್ಯನ ನಿಜವಾದ ಗುಣಗಳ ಯೋಗ್ಯ ಪರೀಕ್ಷೆಗಾಗಿ ನಾವು ಆಧ್ಯಾತ್ಮಿಕ ಕ್ಷೇತ್ರದಲ್ಲಿಯ ಆತನ ನಿಜವಾದ ಸಿದ್ಧಿ ಗಳನ್ನು ಪರಿಗಣಿಸಬೇಕು. ನಾವು ಹಂಬಲಿಸುವ ಸತ್ಯವಸ್ತುವನ್ನು ಆತನಲ್ಲಿ ಕಂಡುಕೊಳ್ಳಬೇಕು. ಈ ಪ್ರಕಾರ ನಮಗೆ ಭರವಸೆಯಾದ ಮೇಲೆ ಆತನ ಕಡೆಗೆ ಸ್ವಾಭಾವಿಕವಾಗಿ ಅಂತರಾಕರ್ಷಣವನ್ನು ಅನುಭವಿಸತೊಡಗುವೆವು; 'ನಮ್ಮ ಭವಿಷ್ಯತ್ತನ್ನು ರೂಪಿಸುವ ವ್ಯಕ್ತಿಯು ಈತನೇ' ಎಂದು ತಿಳಿಯ-ತೊಡಗುವೆವು. ಈ ಭಾವನೆಯು ಕ್ರಮೇಣ ಶ್ರದ್ಧೆಯಾಗಿ ಬೆಳೆಯತೊಡಗಿ ನಾವು ಆತನನ್ನು ಪ್ರೀತಿಸಲಾರಂಭಿಸುವೆವು. ನಾವು ಆತನ ವ್ಯಕ್ತಿತ್ವಕ್ಕೆ ಆದರ ತೋರಿ, ಆತನ ವಿಚಾರಗಳಿಗೆ ತಲೆಬಾಗಿ, ಆತನ ನೇತೃತ್ವದಲ್ಲಿ ದಾರಿ-ಗುಂಟ ಸಾಗುವೆವು. ಈ ಅವಧಿಯಲ್ಲಿ ನಮಗುಂಟಾದ ಲಾಭಗಳ ಅನು-ಭವವು ಗುರುವಿನ ಅಸಾಮಾನ್ಯ ಶಕ್ತಿಗಳ ಬಗ್ಗೆ ವಿಶ್ವಾಸಹುಟ್ಟಿಸುವುದು; ಮತ್ತು ನಾವು ಆತನನ್ನು ಅತಿಮಾನವನೆಂದು ಕಾಣತೊಡಗುವೆವು. ಈಗ ನಮ್ಮ ಆಧ್ಯಾತ್ಮಿಕ ಪ್ರಗತಿಯಲ್ಲಿ ನಮ್ಮ ಶ್ರದ್ಧೆಯು ಬಹಳ ಸಹಾಯಕವಾಗು ವುದು. ಅದು ಸಂಶಯ– ಅನಿಶ್ಚಿತತೆಗಳ ಕಾರ್ಮೋಡಗಳನ್ನು ಚೆದುರಿಸಿ ನಮ್ಮ ಮಾರ್ಗದಿಂದ ಅಡ್ಡಿ–ಅಡಚಣೆಗಳನ್ನು ತೊಲಗಿಸುವುದು. ನಿಜ-

ವಾಗಿಯೂ ಶ್ರದ್ಧೆಯು ಇಡೀ ಆಧ್ಯಾತ್ಮಿಕ ಕಟ್ಟಡದ ಬುನಾದಿಯಾಗಿದೆ. ನೀವು ನಿಜವಾಗಿಯೂ ಯಶಗಳಿಸಬೇಕಾದರೆ ಸತ್ಯವಸ್ತುವಿನಲ್ಲಿಯೂ, ಸಾಕ್ಷಾತ್ಕಾರಕ್ಕಾಗಿ ನೀವು ಅನುಸರಿಸುವ ಸರಿಯಾದ ದಾರಿಯಲ್ಲಿಯೂ, ನೀವು ಶರಣು ಹೋದ ಸಮರ್ಥ ಗುರುವಿನಲ್ಲಿಯೂ ಶ್ರದ್ಧೆಯನ್ನಿಟ್ಟು ಈ ಅಡಿಗಲ್ಲಿನ ಮೇಲೆಯೆ ಆಧ್ಯಾತ್ಮಿಕತೆಯ ಸೌಧವನ್ನು ರಚಿಸಬೇಕು. ಆದರಿಂದ, ನಿಮ್ಮನ್ನು ಮುತ್ತಿರಬಹುದಾದ ದುಷ್ಟಶಕ್ತಿಗಳನ್ನೆಲ್ಲ ನಿರ್ಮೂಲಮಾಡುವ ಅಂತಃಶಕ್ತಿಯೊಂದು ನಿಮಗೆ ದೊರೆಯುವುದು. ನಿಮಗೆ ಬೇಕಾದಾಗ ನವೀನವಾದ ದೈವೀಪ್ರೇರಣೆಯನ್ನು ಪಡೆದುಕೊಳ್ಳಲು ಅದು ಸಹಾಯಮಾಡುವುದು.

ಕೆಲಜನರು ಶ್ರದ್ಧೆಯ ಬಗ್ಗೆ ತಪ್ಪು ಕಲ್ಪನೆಮಾಡುವರು. ತಾವು ಅನುಸರಿಸಿರುವ ಮಾರ್ಗವು ಎಂತಹದೇ ಇರಲಿ, ಸ್ವೀಕರಿಸಿದ ಮಾರ್ಗದರ್ಶಿಯು ಹೇಗೇ ಇರಲಿ, ಶ್ರದ್ಧೆಯೊಂದಿದ್ದರೆ ಜೀವನದ ಸಮಸ್ಯೆಯನ್ನು ಬಿಡಿಸಲು ಸಾಕಾಗುವುದೆಂದು ತಿಳಿಯುವರು. ಇಂಥ ಹುಚ್ಚುನಂಬುಗೆಗಿಂತ ಹೆಚ್ಚು ಹೊಲಬುಗೆಡಿಸುವುದು ಬೇರೆ ಮತ್ತಾವುದೂ ಇರಲಿಕ್ಕಿಲ್ಲ. ಕಲ್ಕತ್ತೆಗೆ ತೀರ ವಿರುದ್ಧ ದಿಕ್ಕನ್ನು ಹಿಡಿದ ಮನುಷ್ಯನೊಬ್ಬನಿಗೆ ಕಲ್ಕತ್ತೆಯನ್ನು ಮುಟ್ಟಲು ಎಂದಿಗಾದರೂ ಸಾಧ್ಯವೆ ? ಸ್ವಾರ್ಥಸಾಧಕ ಠಕ್ಕ ಗುರುವಿನ ಮಾರ್ಗದರ್ಶನಕ್ಕೊಳಗಾದ ಮನುಷ್ಯನಿಗೆ ಸ್ವಾರ್ಥರಹಿತ ಸಂತನಾಗಲು ಸಾಧ್ಯವಿದೆಯೆ ? ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿಯ ಭಾವನೆಗಳಿಂದಲೂ ಆತ್ಮಪ್ರತಿಷ್ಠೆಯ ಭಾವನೆಗಳಿಂದಲೂ ಪ್ರೇರಿತನಾದ ಗರ್ವಿಷ್ಠ ವೇಷಧಾರಿಯನ್ನನುಸರಿಸುವುದರಿಂದ ಯಾವನಾದರೊಬ್ಬನು ಆಸಕ್ತಿ, ದ್ವೇಷಾಹಂಕಾರಗಳಿಂದ ಮುಕ್ತನಾಗಬಲ್ಲನೆ ? ನಾವು ಹೊರಗಿನ ಥಳುಕಿನಿಂದ ಮರುಳಾಗದೆ ತಳದಲ್ಲಿ ಸತ್ಯವನ್ನರಸಲು ಆಳವಾಗಿ ಮುಳುಗಬೇಕು. ಪಾಂಡಿತ್ಯದ, ವಾಕ್ಪಟುತ್ವದ ಅಥವಾ ಶಕ್ತಿಯ ಬಾಹ್ಯಾಡಂಬರದ ಪ್ರೋತ್ಸಾಹನವು ಅನೇಕ ಸಂಗತಿಗಳಲ್ಲಿ ಅನರ್ಥಕಾರಿಯಾದ ಪರಿಣಾಮಗಳನ್ನುಂಟುಮಾಡುವ ಅಂಧಶ್ರದ್ಧೆಯನ್ನು ಬೆಳೆಸುತ್ತದೆ. ಪ್ರಾಮಾಣಿಕ ಮನುಷ್ಯನು ಆಧ್ಯಾತ್ಮಿಕ ಕ್ಷೇತ್ರದಲ್ಲಿ ನಿಜವಾಗಿಯೂ ಮಹತ್ತ್ವವಿರದ ಇಂಥ ಮೋಸದಿಂದ ಭ್ರಮಿಷ್ಟನಾಗುವುದಿಲ್ಲ. ನೀವು ಅನುಸರಿಸಿರುವ ಮಾರ್ಗವು ಅಕಸ್ಮಾತ್ತಾಗಿ ಸರಿಯಾದುದಾಗಿದ್ದು ನೀವು ಆರಿಸಿಕೊಂಡ ಮಾರ್ಗದರ್ಶಿಯು ಅತ್ಯುಚ್ಚ ಶ್ರೇಣಿಯ ಯೋಗ್ಯ

ವ್ಯಕ್ತಿಯೂ,ಆಸಕ್ತಿ-ಅಹಂಕಾರಗಳಿಂದ ದೂರನೂ ಆಗಿದ್ದರೆ ಮಾತ್ರ ಕುರುಡು ನಂಬುಗೆಯು ನಿಃಸಂದೇಹವಾಗಿ ಬಹಳ ಲಾಭದಾಯಕವಾಗಬಲ್ಲುದು. ಇಂಥ ಗುರುವಿನಲ್ಲಿಯ ನಿಮ್ಮ ಅಚಲಶ್ರದ್ಧೆಯು ನಿಮ್ಮನ್ನು ಆಧ್ಯಾತ್ಮಿಕ ಸಿದ್ಧಿಯ ತುತ್ತತುದಿಗೆ ಒಯ್ಯುವುದು. ಏಕೆಂದರೆ, ಆಗ ನೀವು ಸತ್ಯವಸ್ತುವಿನೊಡನೆಯೆ ಸಂಬಂಧ ಬೆಳೆಸುವಿರಿ.

ನಿಜವಾದ ಅರ್ಥದಲ್ಲಿ ಶ್ರದ್ಧೆಯು ಮರ್ತ್ಯನನ್ನು ಅಮೃತತತ್ವದೊಂದಿಗೆ ಜೋಡಿಸುವ ಸಜೀವ ಕೊಂಡಿಯಾಗಿದೆ. ಅಮೃತದೊಂದಿಗೆ ತಾನು ಸ್ವತಃ ಸಂಬಂಧಪಟ್ಟ ಗುರುವಿನ ಮಧ್ಯಸ್ಥಿಕೆಯಿಂದ ಇದು ನಿಃಸಂದೇಹವಾಗಿ ಸಾಧಿಸುವುದು. ಒಮ್ಮೆ ಸ್ಥಾಪಿತವಾದ ಸಂಬಂಧವು ಎಂತಹ ಸಂದರ್ಭದಲ್ಲಿಯೂ ಮುರಿಯಲು ಬಾರದಂತಿದ್ದು ನಾವು ಕೊನೆಯ ಮಜಲನ್ನು ಮುಟ್ಟುವವರೆಗೂ ಉಳಿದುಕೊಳ್ಳುತ್ತದೆ. ಶ್ರದ್ಧೆಯು ಯೋಗದ ಮೂರನೆಯ ಸಾಧನವಾದ ಷಟ್‌ಸಂಪತ್ತಿಗಳಲ್ಲೊಂದು. ಈ ಹಂತದಲ್ಲಿ ಶ್ರದ್ಧೆಯು ನಿಜವಾದುದಾಗಿದ್ದು ಮನುಷ್ಯನು ಅದರಿಂದ ಕ್ಷಣಕಾಲವೂ ವಿರಹಿತನಾಗದಷ್ಟು ದೃಢವಾಗಿ ಸ್ಥಾಪಿತವಾಗಿರುತ್ತದೆ. ಇದರ ಕಾರಣಗಳು ಮಾತ್ರ ಆತನ ತಿಳಿವಳಿಕೆಗೆ ಮೀರಿದುವಾಗಿರುತ್ತವೆ. ಇದಕ್ಕಿಂತ ಮೊದಲಿನ ಹಂತಗಳಲ್ಲೆಲ್ಲ ಶ್ರದ್ಧೆಯು ಕೃತಕವಾಗಿದ್ದು ಅನೇಕ ಕಾರಣಗಳಿಂದ ಎಷ್ಟೋ ಸಲ ಹುಟ್ಟಿ ನಷ್ಟವಾಗಿ ಮತ್ತೆ ಬರುವುದು. ಯೋಗ್ಯಗುರುವು ಅದನ್ನೆಂದಿಗೂ ನಂಬಲಾಗದು. ಶಿಷ್ಯನ ಪ್ರೇಮ ಭಕ್ತಿಗಳ ಉದ್ರೇಕಗಳನ್ನು ಸಹಿಸುತ್ತ, ಯೋಗದ ಸಾಧನಚತುಷ್ಟಯದಲ್ಲಿ ನಿರೂಪಿತವಾದ ಶ್ರದ್ಧೆಯ ಕೊನೆಯ ಮೆಟ್ಟಲಿಗೆ ಆತನು ಬರುವ ಕಾಲವನ್ನು ಸಹನೆಯಿಂದ ನಿರೀಕ್ಷಿಸಬೇಕು. ಆಗ ಶ್ರದ್ಧೆಯು ಆತ್ಮಸಮರ್ಪಣದ ರೂಪವನ್ನು ತಳೆಯಲಾರಂಭಿಸುವುದು. ನಿಜವಾದ ಶ್ರದ್ಧೆಯು ಅನಿರ್ವಚನೀಯ ಸದ್ಗುಣವಾಗಿದ್ದು ಸಾಂಪ್ರದಾಯಿಕ ಧರ್ಮದ ವಲಯವನ್ನು ಮೀರಿರುವುದು. ಅದು ನಮ್ಮನ್ನು ಯಶಸ್ಸಿನ ಕಡೆಗೆ ಒಯ್ಯುವ ನಿರ್ಭೀಕ ಧೈರ್ಯವಾಗಿದೆ; ನಮ್ಮ ಮಾರ್ಗವನ್ನು ಸುಗಮಗೊಳಿಸುವ ವ್ಯಾಪಕಶಕ್ತಿಯಾಗಿದೆ. ವಸ್ತುತಃ ನಮ್ಮ ಜೀವನದ ಸಮಸ್ಯೆಯನ್ನು ಬಿಡಿಸುವುದು ಅದೊಂದೇ.

---

## ಅಧ್ಯಾಯ: ೭

# ನಿರಂತರ ಸ್ಮರಣೆ

ಬೇರೆ ಬೇರೆ ಪ್ರಾಪಂಚಿಕ ಉದ್ಯೋಗಗಳಲ್ಲಿ ತೊಡಗಿದ ಬಹುಜನರ ಕಠಿಣ ಹಾಗು ಕಷ್ಟಮಯ ಜೀವನವು ಅವರನ್ನು ಜೀವನದ ಸಮಸ್ಯೆಗಳಲ್ಲಿ ಎಷ್ಟರ ಮಟ್ಟಿಗೆ ಮಗ್ನರಾಗುವಂತೆ ಮಾಡುವುದೆಂದರೆ, ಕೆಲವು ಮಹತ್ತ್ವದ ಇಲ್ಲವೆ ಆರ್ಥಿಕ ಲಾಭದ ಕೆಲಸಗಳನ್ನು ಬಿಟ್ಟುಕೊಡಲಾರದೆ ತಾವು ಭಕ್ತಿ ಪೂಜೆಗಳಿಗಾಗಿ ವೇಳೆಯನ್ನುಳಿಸಲಾರರೆಂದು ಭಾವಿಸುವರು. ಅವನ್ನು ಅವರು ದುರ್ಲಕ್ಷಿಸಲು ಸುಲಭವಾಗಿ ಸಮರ್ಥರಾಗುವುದಿಲ್ಲ. ಅವರಿಗೆ ಕೆಲ-ಕಾಲ ಕರ್ತ್ತವ್ಯದ ಅರಿವು ಇರುವಂತೆ ತೋರಿದರೂ ಈ ಕಲ್ಪನೆಯು ಅವರನ್ನು ಆ ಮಾರ್ಗದಿಂದ ದೂರವಾಗಿರಿಸುವುದು. ಅವರ ಮನಸ್ಸು ಪ್ರತಿಕ್ಷಣವೂ ಪ್ರಾಪಂಚಿಕ ಜೀವನದ ವಿವಿಧ ಸಮಸ್ಯೆಗಳನ್ನು ಕುರಿತು ಚಿಂತಿಸುವುದರಲ್ಲಿಯೆ ತೊಡಗಿರುವುದು. ದೊಡ್ಡ ವಿಪತ್ತು ಇಲ್ಲವೆ ಕಷ್ಟದಲ್ಲಿ ಸಿಲುಕಿದಾಗ ಮಾತ್ರ ಅವರ ಮನಸ್ಸು ದೇವರ ಕಡೆಗೆ ತಿರುಗುವುದು. ಇದಕ್ಕೆ ಕಾರಣ-ವೆಂದರೆ, ಅವರು ತಮ್ಮ ದೃಷ್ಟಿಯಲ್ಲಿ ಸತತವಾಗಿಟ್ಟುಕೊಂಡ ಸಾಂಸಾರಿಕ ಲಾಭಗಳಿಗೇ ಪ್ರಾಧಾನ್ಯವನ್ನೀಯುವರು. ಹೀಗೆ, ಅವರು ಮಾಯೆ-ಯಲ್ಲಿಯೆ ಸಿಲುಕಿ ಯಾವ ಹಂತದಲ್ಲಿಯೂ ಅದರಿಂದ ಪಾರಾಗುವ ವಿಚಾರ-ವನ್ನೇ ಮಾಡುವುದಿಲ್ಲ. ನಾವು ನಮ್ಮ ಲಕ್ಷ್ಯವನ್ನು ಭಗವಂತನ ಕಡೆಗೆ ಹೊರಳಿಸಿ ಸಾಕ್ಷಾತ್ಕಾರವನ್ನೇ ಜೀವನದ ಮುಖ್ಯ ಗುರಿಯನ್ನಾಗಿ ಭಾವಿಸಿ-ದರೆ ಸ್ವಾಭಾವಿಕವಾಗಿಯೆ ನಾವು ಪ್ರಪಂಚದ ಎಲ್ಲ ವಸ್ತುಗಳಿಗಿಂತ ಅದಕ್ಕೆ ಪ್ರಮುಖಸ್ಥಾನವನ್ನು ಕೊಡಲಾರಂಭಿಸುವೆವು. ಹಾಗೆಂದು ನಾವು ನಮ್ಮ ಪ್ರಾಪಂಚಿಕ ಹೊಣೆಯನ್ನು ಕಡೆಗಣಿಸಿ ಸಂರಕ್ಷಣೆಗಾಗಿ ನಮ್ಮನ್ನವಲಂಬಿಸಿ-ದವರಿಗೆ ಕಷ್ಟ–ಕಾರ್ಪಣ್ಯಗಳುಂಟಾಗುವ ಹಾಗೆ ನಮ್ಮ ಕರ್ತ್ತವ್ಯವನ್ನು ದುರ್ಲಕ್ಷಿಸಬೇಕೆಂದು ಅದರರ್ಥವಲ್ಲ. ದೇವರ ಬಗ್ಗೆ ನಮಗೆ ಎಷ್ಟರಮಟ್ಟಿಗೆ ಕರ್ತ್ತವ್ಯದ ಪರಿಜ್ಞಾನವಿರುವುದೋ, ಅವರ ಬಗೆಗಿನ ಕರ್ತವ್ಯಕ್ಕೂ ನಾವು

ಅಷ್ಟೇ ಜಾಗ್ರತರಾಗಿರಬೇಕು. ಆದರೆ ಅನಾವಶ್ಯಕವಾದ ಯಾವ ಆಸಕ್ತಿಯೂ ಇರಕೂಡದು. ಇದಕ್ಕಾಗಿ ನಾವು ನಮ್ಮ ವಿರಾಮಕಾಲದೊಳ-ಗಿನ ಹಲವು ನಿಮಿಷಗಳನ್ನು ತೆಗೆದಿರಿಸಿಕೊಂಡು ( –ಮಲಗುವ ಮುಂಚಿಯಾದರೆ ಉತ್ತಮ– ) ಕರ್ತವ್ಯಮಾರ್ಗದಲ್ಲಿ ನಮಗೆ ದಾರಿತೋರುವಂತೆಯೂ ಸಹಾಯಮಾಡುವಂತೆಯೂ ನಿಷ್ಕಪಟ ಹೃದಯದಿಂದ ದೇವರನ್ನು ಪ್ರಾರ್ಥಿಸ-ಬೇಕು. ಪ್ರೇಮ–ಭಕ್ತಿಗಳಿಂದ ತುಂಬಿದ ಅಂತಃಕರಣದಿಂದ ನಾವದನ್ನು ತಪ್ಪದೆ ಮಾಡಿದ್ದಾದರೆ ನಮ್ಮ ಪ್ರಾರ್ಥನೆಯು ಎಂದಿಗೂ ಆತನ ಕಿವಿಗೆ ಬೀಳದಿರುವುದಿಲ್ಲ.

ಹೀಗೆ ನಾವು ನಮ್ಮ ಕರ್ತವ್ಯಭಾವನೆಯ ಬಗ್ಗೆ ಜಾಗ್ರತರಾಗಿ ಭಗವದ್ವಿಚಾರವು ನಮ್ಮ ಹೃದಯದಲ್ಲಿ ಪ್ರಾಮುಖ್ಯವನ್ನು ಹೊಂದಿದಾಗ, ನಾವು ಸಾಕ್ಷಾತ್ಕಾರವನ್ನು ಜೀವನದ ಪ್ರಧಾನೋದ್ದೇಶವೆಂದು ಗಣಿಸತೊಡ-ಗುವೆವು. ಸಹಜವಾಗಿಯೆ ಅದರ ಬಗೆಗಿನ ನಮ್ಮ ಹಂಬಲವು ಬಲವಾಗಿ ಬೆಳೆಯುತ್ತ ಹೋಗುವುದು. ಈ ಪ್ರಕಾರ, ನಮ್ಮ ದೈನಂದಿನ ಕೆಲಸದಲ್ಲಿ ಹಾಗು ತೊಂದರೆಗಳ ಮಧ್ಯದಲ್ಲಿ ಸಹ ನಾವು ಮತ್ತೆಮತ್ತೆ ಭಗವತ್‌ಸ್ಮರ-ಣೆಯ ಪ್ರೇರಣೆಯನ್ನು ಪಡೆಯುವೆವು. ಕರ್ತವ್ಯಮಾರ್ಗದಿಂದ ವಿಮುಖ-ರಾಗುವುದು ಪರಿಸ್ಥಿತಿಗಳಿಂದಾಗಲಿ ಹೊರಗಿನ ಕೆಲಸಗಳಿಂದಾಗಲಿ ಆಗಿರದೆ ಕೇವಲ ಅಶಿಕ್ಷಿತ ಮನಸ್ಸಿನ ಅಯೋಗ್ಯ ಚಟುವಟಿಕೆಗಳ ಮೂಲಕವಾಗಿದೆ. ಭಗವಂತನ ಕೇವಲ ಅರಿವು ಕೂಡ ಮನಸ್ಸಿನ ಅನೇಕ ಕೆಡುಕುಗಳನ್ನು ಗುಣಪಡಿಸಿ ನಮ್ಮ ದಾರಿಯಲ್ಲಿಯ ತೊಡಕುಗಳನ್ನು ನಿವಾರಿಸುವುದು. ಹೀಗೆ ನಾವು ದಿನದ ಬಹುಭಾಗದಲ್ಲಿ ನಮ್ಮ ಎಲ್ಲ ಪ್ರಾಪಂಚಿಕ ಕೆಲಸಗಳ-ಲ್ಲಿಯೂ ಭಗವಂತನ ಅರಿವುಳ್ಳವರಾಗಬೇಕು.

ಹೆಜ್ಜೆ ಹೆಜ್ಜೆಗೂ ಭಗವಂತನ ಸ್ಮರಣೆಯು ಅತ್ಯಂತ ಸಹಾಯಕವಾ-ದಾಗ್ಯೂ ಸಾಕ್ಷಾತ್ಕಾರದಲ್ಲಿಯ ನಮ್ಮ ಅಂತಿಮ ಯಶಸ್ಸಿಗೆ ಅಷ್ಟೇ ಸಾಲದು. ನಾವು ಸಾಮಾನ್ಯವಾಗಿ ಯಾವುದಾದರೊಂದು ಮಹತ್ತ್ವದ ಕೆಲಸವನ್ನು ದೇವರ ಹೆಸರಿನಿಂದ ಪ್ರಾರಂಭಿಸುವೆವು; ಮತ್ತು ಬಹುಶಃ ಪ್ರತಿಯೊಂದು ಧರ್ಮದಲ್ಲಿಯೂ ಇದು ವಾಡಿಕೆಯಾಗಿದೆ. ಆದರೆ ಅದು ಕೇವಲ ಸಾಂಪ್ರ-

ದಾಯಿಕ ವಿಷಯವಾಗಿದ್ದು ಅದಕ್ಕೆ ನಿಜವಾದ ಮಹತ್ತ್ವವಿಲ್ಲ. ನಾವು ಭಗವಂತನಿಗೆ ನಿಜವಾದ ಅರ್ಥದಲ್ಲಿ ಅದನ್ನು ಅರ್ಪಿಸುವುದಿಲ್ಲ; ಹಾಗು ಹೃದಯದಲ್ಲಿ ವಸ್ತುತಃ ಭಗವದ್ಭಾವನೆಯಿಂದ ಬಹು ದೂರವಾಗಿಯೆ ಇರುತ್ತೇವೆ. ಈ ಪ್ರಕಾರದ ಭಗವತ್ಸ್ಮರಣೆಯು ಯಾವ ಪ್ರಯೋಜನಕ್ಕೂ ಬಾರದು. ನಾವು ನಮ್ಮ ಎಲ್ಲ ಮಾನಸಿಕ ಹಾಗು ಶಾರೀರಿಕ ಕರ್ಮಗಳಲ್ಲಿಯೂ ಭಗವದ್ಭಾವನೆಯೊಂದಿಗೆ ಸಂಪರ್ಕದಲ್ಲಿರಬೇಕೆಂಬುದೇ ಈ ರೂಢಿಯ ನಿಜವಾದ ಅರ್ಥವಾಗಿದೆ. ಎಲ್ಲ ಚಟುವಟಿಕೆಗಳಲ್ಲಿಯೂ ಆ ಸರ್ವಶ್ರೇಷ್ಠ ಶಕ್ತಿಯೊಂದಿಗೆ ಅವ್ಯಾಹತ ವಿಚಾರಧಾರೆಯಿಂದ ಪ್ರತಿಕ್ಷಣವೂ ಸಂಬಂಧವನ್ನನುಭವಿಸಬೇಕು. ನಮ್ಮ ಎಲ್ಲ ಕರ್ಮಗಳನ್ನೂ ನಾವು, ಸಾಧ್ಯವಿದ್ದಷ್ಟು ಉತ್ತಮ ರೀತಿಯಿಂದ ಸೇವ್ಯನಾಗಿರುವ ಶ್ರೇಷ್ಠ ಗುರುವಿನಿಂದ ನಮಗೆ ನಿರ್ವಹಿಸಲಾದ ದಿವ್ಯ ಕರ್ತ್ತವ್ಯವೆಂದು ಭಾವಿಸಿದರೆ ಇದು ಸುಲಭವಾಗಿ ಸಾಧಿಸಲ್ಪಡುವುದು. ಅಧ್ಯಾತ್ಮದ ದೇಗುಲವನ್ನು ಕಟ್ಟುವುದಕ್ಕೆ ಸೇವೆ ಮತ್ತು ತ್ಯಾಗ– ಇವೆರಡು ಮುಖ್ಯ ಸಾಧನಗಳಾಗಿವೆ. ಪ್ರೇಮವಂತೂ ಅಡಿಗಲ್ಲಿನಂತೆ ಇದ್ದೇ ಇರಬೇಕು. ಯಾವ ಸೇವೆಯನ್ನೇ ಆಗಲಿ, ಸ್ವಾರ್ಥವಿಲ್ಲದೆ ಮಾಡಿದರೆ ಅದು ಸಹಾಯಕವಾಗುವುದು. ಸೇವೆಯಲ್ಲಿ ಪೂಜೆಯ ಭಾವವು ಅಡಕವಾಗಿದೆ. ಸಹಬಾಂಧವನಿಗೆ ಮಾಡಿದ ಸೇವೆಯು, ಸ್ವಾರ್ಥದಿಂದ ಪ್ರೇರಿತವಾಗಿರದಿದ್ದರೆ, ನಿಜವಾದ ಅರ್ಥದಲ್ಲಿ ದೇವರ ಸೇವೆಯೆ. ನಮ್ಮ ದೈನಂದಿನ ಕೆಲಸದಲ್ಲಿ ನಾವು ಮಾಡುವುದೆಲ್ಲ ಹಲವರು ಸಹಬಾಂಧವರಿಗೆ ಸಂಬಂಧಪಟ್ಟೇ ಇರುತ್ತದೆ– ಅವರು ನಮ್ಮ ಮಕ್ಕಳಾಗಿರಬಹುದು, ಗೆಳೆಯರಾಗಿರಬಹುದು, ಅಥವಾ ಆಪ್ತರಾಗಿರಬಹುದು. ಒಂದು ಕೆಲಸವನ್ನು ಮಾಡುವಾಗ, ಸ್ವಪ್ರಯೋಜನಕ್ಕಲ್ಲದೆ ದೇವರ ಸೃಷ್ಟಿಯಲ್ಲಿಯ ಒಬ್ಬನ ಸೇವೆಯನ್ನಾದರೂ ನಾವು ಮಾಡುತ್ತಿರುವೆವೆಂಬ ಭಾವನೆಯು ನಮ್ಮಲ್ಲಿ ಬಂದುದಾದರೆ ನಮ್ಮ ದೈನಿಕ ಕೆಲಸದಲ್ಲಿ ತೋರಿಕೆಗೆ ಮಗ್ನರಾಗಿರುವಂತೆ ಕಂಡರೂ ನಾವು ಸೇವಾಮಾರ್ಗವನ್ನನುಸರಿಸುತ್ತಿರುವೆವು. ಜೀವನದಲ್ಲಿ ಬಹುತರವಾಗಿ ನಮ್ಮ ಚಟುವಟಿಕೆಗಳೆಲ್ಲ ನಮ್ಮ ಮಕ್ಕಳಿಗೂ ಆಪ್ತೇಷ್ಟರಿಗೂ ಜೀವನೋಪಾಯವನ್ನರಸುವುದಕ್ಕೇ ಸಂಬಂಧಪಟ್ಟವಾಗಿರುತ್ತವೆ. ಆದುದರಿಂದ ನಾವು ಅವರನ್ನು ಕರ್ತ್ತವ್ಯಬದ್ಧರಾಗಿ ಸಂರಕ್ಷಿಸಲು ನಮಗೆ ಒಪ್ಪಿಸಲಾದ ದೇವರ ಮಕ್ಕಳೆಂದು ಭಾವಿಸಿ ಸೇವೆ

ಮಾಡಿದುದಾದರೆ ಆ ಮೂಲಕ ದೇವರ ಸೇವೆಯನ್ನು ಮಾಡಿದಂತೆಯೆ. ಅದರಿಂದ ನಾವು ಅನಾವಶ್ಯಕವಾದ ಆಸಕ್ತಿಯನ್ನು ತೊಲಗಿಸಿದಂತಾಗಿ ನಮ್ಮ ಮಾರ್ಗದಲ್ಲಿಯ ಒಂದು ದೊಡ್ಡ ವಿಘ್ನವು ದೂರವಾಗುವುದು. ಈ ಕ್ರಮವು ಸರಳವಾಗಿದ್ದರೂ ನಿಮ್ಮ ಎಲ್ಲ ಕಾರ್ಯಗಳಲ್ಲಿಯೂ ನಿಮ್ಮನ್ನು ಆ ಸರ್ವಶ್ರೇಷ್ಠ ಪ್ರಭುವಿನ ಬಗ್ಗೆ ಸತತ ವಿಚಾರದಲ್ಲಿ ತೊಡಗಿಸುವುದು. ಇದು ನಿಮ್ಮ ಹೃದಯದಲ್ಲಿ ಬೇರೂರಿದರೆ ನಿಮ್ಮ ಪ್ರತಿಯೊಂದು ಕಾರ್ಯವೂ ಸ್ವಾರ್ಥರಹಿತ ವಾಗಿ ಇಲ್ಲವೆ ವೈಯಕ್ತಿಕ ಆಸಕ್ತಿಯಿಲ್ಲದೆ ದೈವೀಪ್ರೇರಣೆಯಿಂದ ಕೇವಲ ಕರ್ತವ್ಯಕ್ಕೋಸ್ಕರ ಕರ್ತವ್ಯವಾಗಿ ಪರಿಣಮಿಸುವುದು. ಆಗ ವಿಶ್ವಪ್ರೇಮವು ಪ್ರಬಲವಾಗಿ ದೇವರ ಸೃಷ್ಟಿಯ ಪ್ರತಿಯೊಂದು ಜೀವಿಯನ್ನೂ ನಾವು ವ್ಯಾಮೋಹರಹಿತರಾಗಿ ಪ್ರೀತಿಸಲಾರಂಭಿಸುವೆವು. ಅದು ನಮ್ಮನ್ನು ಭಕ್ತಿ ಹಾಗು ತ್ಯಾಗದ ಕಡೆಗೆ ಒಯ್ಯುವುದು. ಭಕ್ತಿಯು ನಮ್ಮ ಮಾರ್ಗವನ್ನು ಸುಗಮಗೊಳಿಸಿ ನಮ್ಮ ಹೃದಯದಲ್ಲಿ ಭಗವತ್‌ಪ್ರವಾಹವು ಹರಿದು ಬರಲು ದಾರಿಯನ್ನುಂಟುಮಾಡುವುದು. ಅದು ನಮ್ಮ ಮಾರ್ಗದಿಂದ ಕೊಳೆ-ಕಸವನ್ನೆಲ್ಲ ತೆಗೆದುಹಾಕಿ ನಮ್ಮ ಮುಂದಿನ ನಡೆಯನ್ನು ಸುಗಮಗೊಳಿಸು-ವುದು. ಆ ಕಸವು ನಿಜವಾಗಿ ನಮ್ಮ ಮನಸ್ಸಿನಲ್ಲಿ ಕ್ಷೋಭ ಹಾಗು ಚಿಂತೆ ಯನ್ನು ಹುಟ್ಟಿಸುವ ವಿಚಾರಗಳ ಸಂಘರ್ಷದ ಪರಿಣಾಮವಾಗಿದೆ. ಧ್ಯಾನ ದಿಂದ ನಾವು ನಮ್ಮ ಮನಸ್ಸಿನಲ್ಲಿ ತಾತ್ಪೂರ್ತಿಕ ವಿರಾಮವನ್ನುಂಟು ಮಾಡು-ವುದರಿಂದ ನಾವು ದೈವೀಶಕ್ತಿಯ ಸಂಪರ್ಕದಲ್ಲಿರುವಷ್ಟು ಕಾಲ ಶಾಂತಿಯು ನೆಲೆಸಿರುವುದು. ಆದರೆ ಕೇವಲ ನಿಶ್ಚಿತಕಾಲದಲ್ಲಷ್ಟೇ ಮಾಡಲಾಗುವ ಧ್ಯಾನವು ಸಾಲದು. ಏಕೆಂದರೆ, ನಾವು ಸ್ವಲ್ಪಕಾಲಮಾತ್ರ ಪವಿತ್ರ ವಿಚಾರ ದಲ್ಲಿದ್ದು ಅನಂತರ ದೇವರ ಭಾವನೆಯೆ ಇಲ್ಲದವರಾಗಿ ದಿನದ ಬಹುಭಾಗ ಸೇವೆ ಹಾಗು ಭಕ್ತಿಮಾರ್ಗದಿಂದ ದೂರವಾಗಿರುವೆವು. ಇದೇ ಕಾರಣ-ದಿಂದಾಗಿ ಅನೇಕ ವರ್ಷಗಳ ಅಭ್ಯಾಸದ ಅನಂತರವೂ ನಾವು ಆಧ್ಯಾತ್ಮಿಕ ಸಿದ್ಧಿಯ ತೀರ ಕೆಳದರ್ಜೆಯಲ್ಲಿಯೆ ಉಳಿದು ಬಿಡುತ್ತೇವೆ. ನಾವು ಸರಿಯಾದ ಸಮರ್ಥಮಾರ್ಗದರ್ಶಿಯ ನೇತೃತ್ವದಲ್ಲಿ ನಡೆದುದಾದರೆ, ಧ್ಯಾನಸಮಯದಲ್ಲಿ ವಸ್ತುತಃ ಕೇವಲ ಶಾಂತಿ-ಸರಳತೆಗಳನ್ನನುಭವಿಸುವೆವು. ಆದರೆ ಸಾಧಕನು ಸಾಮಾನ್ಯವಾಗಿ ಇದನ್ನು ತಿಳಿದುಕೊಳ್ಳಲು ಸಮರ್ಥನಾಗುವುದಿಲ್ಲ. ಏಕೆಂದರೆ

ಆರಂಭದ ಹಂತಗಳಲ್ಲಿ ಇದು ಆತನ ಕಲ್ಪನೆಯನ್ನು ಮೀರಿರುವುದು. ಈ ರೀತಿ ಪರಿಣಾಮವು ಕಾಣದಿರುವುದರಿಂದ ಆತನು ಧ್ಯಾನಸಮಯದಲ್ಲಿ ತನಗೇನೂ ಅನುಭವವಾಗುವುದಿಲ್ಲವೆಂದು ದೂರುತ್ತಾನೆ. ಇದು, ಮುಖ್ಯವಾಗಿ, ಅಭ್ಯಾಸದ ಕೆಲವು ನಿಮಿಷಗಳ ವರೆಗೆ ಮಾತ್ರ ಆತನು ದೈವೀಶಕ್ತಿಯ ಸಂಪರ್ಕದಲ್ಲಿರುವುದರ ಫಲವಾಗಿದೆ. ಹೀಗೆ, ಧ್ಯಾನಸಮಯದಲ್ಲುಂಟಾದ ನಿಜವಾದ ವಸ್ತುಲಾಭವು ಆತನೊಂದಿಗೆ ಸ್ವಲ್ಪಕಾಲಮಾತ್ರವಿರುತ್ತದೆ. ಇದಕ್ಕೆ ವಿಪರೀತವಾಗಿ, ಒಬ್ಬನು ಧ್ಯಾನದಲ್ಲಿ ಲಭಿಸಿದ ಪರಿಣಾಮವನ್ನು ದಿನದ ಬಹುಭಾಗ ಇಟ್ಟುಕೊಳ್ಳಲು ಪ್ರಯತ್ನಿಸಿ ಆ ಸ್ಥಿತಿಯಲ್ಲಿ ಸಾಧ್ಯವಾದಷ್ಟು ಹೆಚ್ಚು ವೇಳೆ ಇರುವನೆಂದು ಕಲ್ಪಿಸೋಣ. ಆತನು ಒಂದು ರೀತಿಯಲ್ಲಿ ದೇವರ ಸಂತತ ಸ್ಮರಣೆಯಲ್ಲಿರುವನಾದುದರಿಂದ ಆತನ ಪ್ರಗತಿಯು ಸುಲಭವೂ ಶೀಘ್ರವೂ ಆಗುವುದು.

ಮನುಷ್ಯನು ಜೀವನದಲ್ಲಿ ಸಾಂಸಾರಿಕ ಆಸಕ್ತಿ ಹಾಗು ಹೊಣೆಗಳಿಂದಾಗಿ ಅನೇಕ ಚಿಂತೆ–ಕಳವಳಗಳಿಂದ ಮುತ್ತಲ್ಪಟ್ಟಿರುವುದರಿಂದ ನಿರಂತರ ವಲ್ಲದಿದ್ದರೂ ಪದೇಪದೇ ದೇವರ ಸ್ಮರಣೆಯೂ ಸಾಧ್ಯವಿಲ್ಲವೆಂದು ಕೆಲಜನರು ತಿಳಿದಿರುವರು. ಆದರೆ ಇದು ಬಹು ಸುಲಭಕ್ರಮವೆಂಬುದನ್ನೂ, ಎಷ್ಟೇ ಚಿಂತೆ–ಕೆಲಸಗಳಿದ್ದರೂ ನಿಜಾರ್ಥದಲ್ಲಿ ದೇವರ ಕಡೆಗೆ ಲಕ್ಷ್ಯವನ್ನು ಹೊರಳಿಸಿದ್ದಾದರೆ ಯಾರು ಬೇಕಾದರೂ ಇದನ್ನನುಸರಿಸಬಹುದೆಂಬುದನ್ನೂ ಅಭ್ಯಾಸ-ಅನುಭವಗಳು ಅವರಿಗೆ ತೋರಿಸಿಕೊಡುವುವು.

ಆಧ್ಯಾತ್ಮಿಕ ಸಾಧನೆಯಲ್ಲಿ 'ಗುರುವು ಸರ್ವಶ್ರೇಷ್ಠ ದೈವೀಶಕ್ತಿ'ಯೆಂಬ ಕಲ್ಪನೆಯು ಬಹಳ ಸಹಾಯಕವಾಗುವುದು. ಆತನನ್ನು ಅತಿಮಾನವನೆಂದು ತಿಳಿದು ನೀವು ಮಾರ್ಗದರ್ಶನಕ್ಕಾಗಿ ಆತನನ್ನಾಶ್ರಯಿಸುವಿರಿ. ನಿಮ್ಮ ಸ್ವಾಮಿಗೆ ಎಲ್ಲವನ್ನೂ ಸಮರ್ಪಿಸುತ್ತ ಜೀವನದ ದೈನಂದಿನ ಕಾರ್ಯಗಳನ್ನು ಮಾಡುತ್ತ ಹೋದರೆ ಕೊನೆಗೆ ಅದರಿಂದ ಅದೆಷ್ಟು ಲಾಭವಾಗುವುದೆಂಬುದನ್ನು ಊಹಿಸಿರಿ. ಒಂದು ಕೆಲಸವನ್ನು ಮಾಡುವಾಗ ಅದನ್ನು ಸ್ವಂತಕ್ಕಾಗಿ ಅಲ್ಲ, ನಿಮ್ಮ ಸ್ವಾಮಿಗಾಗಿ ಮಾಡುತ್ತಿರುವಿರೆಂದು ಭಾವಿಸಿರಿ. ಅದೇಕೆ, ನಿಮ್ಮ ಸ್ವಾಮಿಯೆ ತನಗಾಗಿ ಅದನ್ನು ಮಾಡುತ್ತಿರುವನೆಂದು ಕಲ್ಪಿಸಿರಿ. ಉಪಾಹಾರ ಮಾಡುವಾಗ ಗುರುವೇ ಮಾಡುವನೆಂದು ತಿಳಿಯಿರಿ. ಕಚೇರಿಗೆ

ಹೋದಾಗ ನಿಮ್ಮ ಗುರುವೇ ಎಲ್ಲವನ್ನೂ ಮಾಡುತ್ತಿರುವನೆಂದು ಭಾವಿಸಿರಿ. ನೀವು ಕಚೇರಿಯಿಂದ ತಿರುಗಿ ಬರುವಾಗ ದಾರಿಯಲ್ಲಿ ಒಂದು ಆಕರ್ಷಕ ನೃತ್ಯವನ್ನು ನೋಡುವಿರೆಂದು ಕಲ್ಪಿಸೋಣ. ನಿಮ್ಮ ದೃಷ್ಟಿಯು ನರ್ತಕನ ಮೋಹಕವೇಷದಿಂದ ಸೆರೆಹಿಡಿಯಲ್ಪಡುವುದು. ಒಂದು ಕ್ಷಣಕಾಲ ನಿಮ್ಮ ವಿಚಾರಗಳು ವಿನೋದದಲ್ಲಿ ತೊಡಗಿದಂತೆ ಕಂಡುಬರುವುದು. ಆಗ ಕೂಡ ನಿಮ್ಮ ಗುರುವೇ ಆ ನೃತ್ಯವನ್ನು ನೋಡುತ್ತಿರುವನೇ ಹೊರತು ನೀವಲ್ಲ-ವೆಂದು ಭಾವಿಸಿರಿ. ತತ್‌ಕ್ಷಣ ಅದರ ಬಗ್ಗೆ ನಿಮ್ಮ ಕುತೂಹಲವು ಇಲ್ಲ-ದಂತಾಗುವುದು. ಏಕೆಂದರೆ ಆ ಆಕರ್ಷಣದಿಂದ ನಿಮ್ಮನ್ನು ಮುಕ್ತಗೊಳಿ-ಸಲು ಗುರುವಿನ ಶಕ್ತಿಯು ನಿಮ್ಮೊಳಗೆ ಹರಿಯತೊಡಗುವುದು. ನೀವು ಕಚೇರಿಯಿಂದ ತಿರುಗಿ ಬಂದಾಗ ನಿಮ್ಮ ಮಕ್ಕಳು, ಹಲವು ಗಂಟೆಗಳ ಅನಂತರ ನಿಮ್ಮನ್ನು ಕಂಡು ಹಿಗ್ಗುವರು. ಸ್ವಾಭಾವಿಕವಾಗಿಯೆ ನೀವು ಕೂಡ ಅವರ ಹರ್ಷವನ್ನು ಕಂಡು ಹಿಗ್ಗುವಿರಿ. ಒಂದರೆಕ್ಷಣ ನಿಮ್ಮ ಲಕ್ಷ್ಯವು ಅವರ ಕಡೆಗೆ ಹೊರಳಿ ಪವಿತ್ರವಿಚಾರದಿಂದ ಸ್ವಲ್ಪದೂರವಾದಂತೆ ಅನುಭವಿ-ಸುವಿರಿ. ಆಗ ನೀವು ಮಾಡತಕ್ಕುದೇನೆಂದರೆ, ನಿಮ್ಮ ಗುರುವೇ ಅದನ್ನೆಲ್ಲ ಆಸ್ವಾದಿಸುತ್ತಿರುವನೆಂದು ತಿಳಿಯಬೇಕು. ಇದರಿಂದ ನೀವು ಮತ್ತೆ ಅದೇ ಪವಿತ್ರ ವಿಚಾರದ ಸಂಪರ್ಕದಲ್ಲಿರುವಿರಿ. ನೀವು ನಿಮ್ಮ ಗೆಳೆಯನೊಂದಿಗೆ ಹರಟೆಹೊಡೆಯುತ್ತಿದ್ದರೆ, ನೀವಲ್ಲ, ನಿಮ್ಮ ಗುರು ಆತನೊಂದಿಗೆ ಮಾತ-ನಾಡುತ್ತಿರುವನೆಂದು ತಿಳಿಯಿರಿ. ನಡೆಯುವಾಗ ಗುರುವೇ ನಡೆಯುತ್ತಿ-ರುವನೆಂದು ಭಾವಿಸಿರಿ. ಧ್ಯಾನದಲ್ಲಿ, ನೀವಲ್ಲ, ನಿಮ್ಮ ಗುರುವೇ ತನ್ನ ರೂಪದ ಮೇಲೆ ಧ್ಯಾನಿಸುವನೆಂದು ತಿಳಿದರೆ ಅದು ಅತ್ಯುತ್ತಮ ಫಲವನ್ನು ಕೊಡುವುದು. ಅದರಂತೆಯೆ ದಿನದ ಎಲ್ಲ ಕೆಲಸಗಳಲ್ಲಿಯೂ ಹೀಗೆಯೆ ಹೊಂದಿಸಿಕೊಳ್ಳಬಹುದು ನೀವು ಈ ಭಾವನೆಯನ್ನು ಬೆಳೆಸಿಕೊಂಡು, ನಿಮ್ಮ ಬದಲಾಗಿ ನಿಮ್ಮ ಗುರುವೇ ಪ್ರತಿಯೊಂದು ಕೆಲಸವನ್ನು ಮಾಡುವ ನೆಂಬ ದೃಷ್ಟಿಯನ್ನಿಟ್ಟುಕೊಂಡುದಾದರೆ ಎಲ್ಲ ಕಾಲದಲ್ಲಿಯೂ ನೀವು ನಿರಂತರ ಸ್ಮರಣೆಯಲ್ಲಿರುವಿರಿ. ಇಷ್ಟೇ ಅಲ್ಲ, ನಿಮ್ಮ ಕಾರ್ಯಗಳು ಯಾವ ಪರಿಣಾಮ ವನ್ನೂ ಉಂಟುಮಾಡದೆ ಮುಂದಿನ ನಿಮ್ಮ ಸಂಸ್ಕಾರಗಳು ಕಟ್ಟಾಗುವುವು.

ಈ ಕ್ರಮವನ್ನು ಮನಃಪೂರ್ವಕವಾಗಿ ಮುಂದುವರಿಸಿದುದಾದರೆ

ನಿಮ್ಮ ದೃಷ್ಟಿಯಲ್ಲಿ ಗುರುವಿನ ರೂಪವು ಸತತವಾಗಿ ಉಳಿದು ಒಳಗೂ ಹೊರಗೂ ಆತನ ಸಾನ್ನಿಧ್ಯವನ್ನನುಭವಿಸುವಿರಿ. ವಸ್ತುತಃ ನಿಜವಾದ ಗುರುವು ಆತನ ಅಂತರಾತ್ಮವೇ ವಿನಾ ಬಾಹ್ಯಸ್ವರೂಪವಲ್ಲ. ಆದರೂ ರೂಪ ವನ್ನು ಸಂಪೂರ್ಣವಾಗಿ ದುರ್ಲಕ್ಷಿಸುವುದು ಸಾಧ್ಯವಿಲ್ಲ. ಆದರೆ ಯಾರು ಭೌತಿಕ ರೂಪವೇ ಗುರುವೆಂಬ ಕಲ್ಪನೆಗೆ ಅಂಟಿಕೊಳ್ಳುವರೋ ಅವರು ಸ್ಥೂಲತೆಯ ಜಾಲದಲ್ಲಿ ಸಿಕ್ಕು ಗೊಂದಲದಲ್ಲಿ ಬೀಳುವರು. ಕಬೀರದಾಸನು ಇಂಥವರನ್ನು 'ಗುರುಪಶು'ವೆಂದು ಸರಿಯಾಗಿಯೆ ಕರೆದಿದ್ದಾನೆ. ಆದರೆ ಗುರುವು ಪರಮಾತ್ಮನಲ್ಲಿ ಲಯಹೊಂದಿದ ಮಹಾದಿವ್ಯಾತ್ಮನಾಗಿದ್ದರೆ ಆತನ ರೂಪದ ಧ್ಯಾನವು ಶಿಷ್ಯರಿಗೆ ಅತ್ಯಂತ ಲಾಭದಾಯಕವಾಗುವುದು. ಹೊರನೋಟಕ್ಕೆ ಆತನ ಶರೀರವು ಸ್ಥೂಲವಾಗಿದ್ದರೂ ಆತನ ಅಂತರಾತ್ಮ-ದಷ್ಟೇ ಸೂಕ್ಷ್ಮಗುಣವುಳ್ಳುದಾಗಿರುವುದು. ಇಂಥ ಗುರುವಿನ ರೂಪದ ಮೇಲೆ ಧ್ಯಾನಮಾಡಿದರೆ ನೀವು ನಿಮ್ಮ ಸ್ಥೂಲತೆಯನ್ನು ಕಳೆದುಕೊಳ್ಳತೊಡ-ಗುವಿರಲ್ಲದೆ ಆತನ ಅಂತರಾತ್ಮದ ಸೂಕ್ಷ್ಮತಮ ಸ್ಥಿತಿಯನ್ನು ಹೀರಿಕೊಳ್ಳ-ಲಾರಂಭಿಸುವಿರಿ. ನೀವು ದೃಷ್ಟಿಯಲ್ಲಿರಿಸಿಕೊಂಡ ರೂಪವು ಕೆಲಕಾಲದ ಮೇಲೆ ಅದೃಶ್ಯವಾಗಿ ಕ್ರಮೇಣ ನೀವು ಶುದ್ಧಸತ್ಯದ ಹಂತಕ್ಕೆ ಏರುವಿರಿ. ನೀವು ಸ್ವಲ್ಪಕಾಲ ಸತತವಾಗಿ ಒಂದು ವಸ್ತುವನ್ನು ನೋಡುತ್ತಿದ್ದರೆ ಅದರ ರೂಪು ದೃಷ್ಟಿಯಿಂದ ಹೇಗೆ ಮಾಯವಾಗುವುದೆಂಬುದನ್ನು ನಾನು 'ಸಹಜ ಮಾರ್ಗದ ಹತ್ತು ನಿಯಮಗಳ ವ್ಯಾಖ್ಯಾನ' (Commentary on Ten Commandments of Sahaj Marga) ವೆಂಬ ಪುಸ್ತಕದಲ್ಲಿ ಚರ್ಚಿಸಿದ್ದೇನೆ. ಈ ಪ್ರಕಾರ ನಾವು ಬಾಹ್ಯರೂಪದಿಂದ ಒಳಗಡೆ ಪಯಣ ಮಾಡಿ, ಆಮೇಲೆ, ಎಲ್ಲಿ ಪ್ರತಿಯೊಂದು ವಸ್ತುವೂ ಅದೃಶ್ಯವಾಗುವುದೋ, ಆ ನಿಜಧಾಮವನ್ನು ಸೇರುವೆವು.

## ಅಧ್ಯಾಯ: ೮

# ಆತ್ಮಸಮರ್ಪಣ

ಸರ್ವಶ್ರೇಷ್ಠ ಗುರುವಿನಲ್ಲಿ ತಾದಾತ್ಮ್ಯ ಹೊಂದುವುದಕ್ಕಾಗಿ ನಾವು ಭಕ್ತಿ-ಯನ್ನಾಚರಿಸುವೆವು. ಆತನನ್ನು ಶ್ರದ್ಧೆ ಗೌರವಗಳಿಂದ ಕಾಣುವೆವು. ಕ್ರಮೇಣ ಆತನಲ್ಲಿ ನಮ್ಮ ಸಲುಗೆಯು ಪ್ರಗಾಢವಾಗಿ ನಮ್ಮ ದೃಷ್ಟಿಯಲ್ಲಿ ಉಳಿದ ವಸ್ತುಗಳೆಲ್ಲ ಮಹತ್ತ್ವವನ್ನು ಕಳೆದುಕೊಳ್ಳುವುವು. ಇದು ಆತನ ಸಂಕಲ್ಪಕ್ಕೆ ಅಧೀನವಾದಂತೆಯೆ. ಅಥವಾ ಬೇರೆ ಶಬ್ದಗಳಲ್ಲಿ ಹೇಳುವುದಾದರೆ, ಆತ್ಮ-ಸಮರ್ಪಣದ ಆರಂಭ. ನಮ್ಮ ಶ್ರದ್ಧೆಯು ಪ್ರಬಲವಾದಂತೆಲ್ಲ ಅದು ಬೆಳೆಯುತ್ತ ಹೋಗಿ ನಮ್ಮ ಮನಸ್ಸಿನ ಹೊಯ್ದಾಟವನ್ನು ನಿಲ್ಲಿಸಿ ನಮ್ಮನ್ನು ಒಂದು ನಿಶ್ಚಲಸ್ಥಿತಿಗೆ ತರುವುದು. ಕಾಲಕ್ರಮದಲ್ಲಿ ನಾವು ಒಂದು ದೊಡ್ಡ ಶಕ್ತಿಗೆ ವಶರಾದಂತೆಯೂ ಅದು ನಮ್ಮ ಮನಸ್ಸನ್ನು ಬೇರೆ ಪ್ರತಿಯೊಂದು ವಸ್ತುವಿನಿಂದ ವಿಮುಖ ಮಾಡುತ್ತಿರುವಂತೆಯೂ ಅನುಭವಿಸತೊಡಗುವೆವು. ನಾವು ಇಂದ್ರಿಯಗಳ ಉಚಿತ ಕಾರ್ಯಗಳಲ್ಲಿ ಸದಾ ನಿರತರಾಗಿ ಅನಿಷ್ಟ ಪ್ರವೃತ್ತಿಗಳಿಂದ ಮುಕ್ತರಾಗುವೆವು. ಆತ್ಮಸಮರ್ಪಣವೆಂದರೆ ತನ್ನನ್ನು ಪೂರ್ಣವಾಗಿ ಉಪೇಕ್ಷಿಸಿ ಗುರುವಿನ ಸಂಕಲ್ಪಕ್ಕೆ ಸಂಪೂರ್ಣ ಮಾರುಹೋಗು ವುದಲ್ಲದೆ ಬೇರೇನೂ ಅಲ್ಲ. ಈ ಸ್ಥಿತಿಯಲ್ಲಿ ಶಾಶ್ವತವಾಗಿ ನೆಲೆಸುವುದೆಂದರೆ ಆತ್ಮನಿರಸನದ ಸ್ಥಿತಿಯು ಆರಂಭವಾದಂತೆಯೆ. ಶ್ರೇಷ್ಠಗುರುವಿಗೆ ನಾವು ಶರಣಾಗತರಾದಾಗ ಆತನಿಂದ ಅತ್ಯುಚ್ಚ ದೈವೀಶಕ್ತಿಯನ್ನು ಸತತವಾಗಿ ಆಕರ್ಷಿಸತೊಡಗುವೆವು. ಈ ಸ್ಥಿತಿಯಲ್ಲಿ ಮನುಷ್ಯನು ತನ್ನ ಗುರುವಿನ ಇಚ್ಛೆಯಂತೆ ಮಾತ್ರ ವಿಚಾರಿಸುವನು, ವರ್ತಿಸುವನು. ಜಗತ್ತಿನಲ್ಲಿ ತನ್ನ ದೆಂಬುದೇನೂ ಇಲ್ಲವೆಂದೂ, ಎಲ್ಲವೂ ಗುರುವಿನ ಪವಿತ್ರ ನ್ಯಾಸವೆಂದೂ ಅನುಭವಿಸಿ ಪ್ರತಿಯೊಂದು ಕಾರ್ಯವನ್ನು ಗುರುವಿನಾಜ್ಞೆಯೆಂದು ತಿಳಿದು ಮಾಡುವನು. ಆತನ ಇಚ್ಛೆಯು ಗುರುವಿನಿಚ್ಛೆಗೆ ಸಂಪೂರ್ಣವಾಗಿ ವಶವರ್ತಿ

ಯಾಗುವುದು. ತನ್ನ ಅಣ್ಣನಾದ ಶ್ರೀರಾಮನನ್ನು ತಿರುಗಿ ಕರೆತರಲು ಅಯೋಧ್ಯೆಯ ಜನರೊಂದಿಗೆ ವನಕ್ಕೆ ಹೋದ ಭರತನು ಆತ್ಮಸಮರ್ಪಣದ ಸುಂದರವಾದ ಉದಾಹರಣೆಯನ್ನು ನಮಗೆ ಕೊಟ್ಟಿದ್ದಾನೆ. ಜನರ ಒತ್ತಾಯದ ಪ್ರಾರ್ಥನೆಗೆ ಉತ್ತರವಾಗಿ ಶ್ರೀರಾಮನು ಗಂಭೀರಭಾವದಿಂದ, ಭರತನು ಹೇಳಿದರೆ ತಾನು ಬರಲು ಸಿದ್ಧನಿರುವುದಾಗಿ ಹೇಳಿದ. ಎಲ್ಲರ ದೃಷ್ಟಿಯು ಭರತನ ಕಡೆಗೆ ಹೊರಳಿತು. ಆದರೆ ಆತನು ಶಾಂತಭಾವದಿಂದ, " ಅಪ್ಪಣೆಕೊಡುವುದು ನನ್ನ ಕೆಲಸವಲ್ಲ; ನಾನು ಕೇವಲ ಆಜ್ಞಾಪಾಲಕ " ಎಂದು ಉತ್ತರಕೊಟ್ಟನು.

ಭಗವದ್ಗೀತೆಯೂ ಸಮರ್ಪಣದ ಸ್ಥಿತಿಯನ್ನು ಕುರಿತು ಹೇಳಿದೆ. ಅದು ಸುಲಭವಾಗಿ ಪ್ರಾಪ್ತವಾಗುವ ವಿಷಯವಲ್ಲ. ಭಕ್ತಿಯ ಪ್ರಾಥಮಿಕ ನಿಯಮಗಳನ್ನನುಸರಿಸುತ್ತ ನಡೆದು ಎಲ್ಲ ಇಂದ್ರಿಯಗಳ ಹಾಗು ಬುದ್ಧಿಶಕ್ತಿಗಳ ಪೂರ್ಣ ನಿರಸನವಾದ ಮೇಲೆ ಅದು ಪ್ರಾರಂಭವಾಗುವುದು. ನಾವು ಗುರುವನ್ನು ಅತಿಮಾನವನೆಂದು ತಿಳಿದು ಆತನಿಗೆ ಶರಣುಹೋಗುವೆವು. ನಾವು ಆತನನ್ನು ಶ್ರದ್ಧೆ-ಗೌರವಗಳಿಂದ ಪ್ರೀತಿಸುತ್ತ ಆತನ ಕೃಪಾಕಟಾಕ್ಷವನ್ನು ಸೆಳೆಯಲು ಎಲ್ಲ ರೀತಿಯಿಂದಲೂ ಯತ್ನಿಸುವೆವು. ಇದಕ್ಕಾಗಿ ನಾವು, ಕೇವಲ ಸುಗಮತೆಗಾಗಿ ಪ್ರಾಪಂಚಿಕರೊಂದಿಗೆ ಹೇಗೋ ಹಾಗೆ ಆತನೊಂದಿಗೆ ಸಂಬಂಧವನ್ನು ಕಲ್ಪಿಸುವೆವು. ನಾವು ಆತನನ್ನು ತಂದೆ, ಅಣ್ಣ, ಗುರು ಅಥವಾ ಪ್ರಿಯತಮನೆಂದು ಭಾವಿಸುವೆವು. ಈ ಪದ್ಧತಿಯನ್ನು ಮನಃಪೂರ್ವಕವಾಗಿ ಅನುಸರಿಸಿದುದಾದರೆ ಶಿಷ್ಯನಿಗೆ ತುಂಬ ಸಹಾಯವಾಗುವುದು. ಈ ರೀತಿ ಸ್ಥಾಪಿತವಾದ ಆಕರ್ಷಣದ ಗಾಢ ಸಂಬಂಧವು ಆತನನ್ನು ಭಕ್ತಿಯ ಹಾಗು ಸಮರ್ಪಣದ ಸ್ಥಿತಿಗೆ ಕೊಂಡೊಯ್ಯುವುದು. ಗುರುವನ್ನು ತಾಯಿಯೆಂದು ಭಾವಿಸುವುದಂತೂ ಶಿಷ್ಯನಿಗೆ ಅತ್ಯಂತ ಯುಕ್ತವೂ ಲಾಭದಾಯಕವೂ ಆದುದೆಂದು ನನ್ನ ಅಭಿಪ್ರಾಯ. ತಾಯಿಯು ಪ್ರೀತಿ–ಮಮತೆಗಳ ಮೂರ್ತಿಯೆ ಆಗಿದ್ದಾಳೆ. ಸದಾಕಾಲವೂ ತನ್ನ ಮಗುವಿಗೆ ಸುಖ-ಸೌಕರ್ಯಗಳನ್ನೊದಗಿಸುವುದರಲ್ಲಿ ಯತ್ನಶೀಲಳಾದ ಮಾತೆಯ ಹೃದಯವು ಮಾತ್ರ ಮಗುವಿನಿಂದ ತನಗುಂಟಾದ ಎಲ್ಲ ತೊಂದರೆ-ದುಃಖಗಳನ್ನು ಸಹಿಸಬಲ್ಲುದು. ನಿಜವಾದ ಗುರುವಿನ ಸ್ಥಾನವೂ ಅದೇ

ಆಗಿದೆ. ಆತನು ಶಿಷ್ಯನ ಆಧ್ಯಾತ್ಮಿಕವಾತೆ. ಆದುದರಿಂದ ಗುರುವು ಮಗುವೆನಿಸುವ ಶಿಷ್ಯನ ಆಧ್ಯಾತ್ಮಿಕ ಹಿತವನ್ನೇ ಯಾವಾಗಲೂ ನೋಡು ತ್ತಿರುತ್ತಾನೆ. ಶಿಷ್ಯನೊಂದಿಗೆ ಗುರುವಿನ ಗಾಢವಾದ ಮಮತೆಯ ಸಂಬಂಧ ವಿರುವುದರಿಂದಲೂ ಜಗತ್ಪಿತನೊಂದಿಗೆ ಆಧ್ಯಾತ್ಮಿಕ ಮಾತೆಯೆನಿಸುವ ಗುರುವಿನ ಸಲುಗೆಯಿರುವುದರಿಂದಲೂ ಭಗವಂತನ ಲಕ್ಷ್ಯವು ಶಿಷ್ಯನ ಕಡೆಗೆ ತಿರುಗುವುದು. ಮಾತೆಯ ಮಮತೆಯು ಸುಪ್ರಸಿದ್ಧವಾಗಿದೆ. ಆದರೆ ಗುರುವಿನ ಮಮತೆಯು—ಅದಕ್ಕಿಂತಲೂ ಹೆಚ್ಚಾಗಿ ದೇವರ ಮಮತೆಯು—ಜನರಿಗೆ ಕಡಿಮೆ ತಿಳಿದಿದೆ. ತಾಯಿಯ ಹಾಗು ನಿಜವಾದ ಗುರುವಿನ ಕಾರ್ಯ ಗಳು ತೀರ ಸಮಾನವಾಗಿವೆ. ತಾಯಿಯು ಮಗುವನ್ನು ತನ್ನ ಗರ್ಭದಲ್ಲಿ ಕೆಲಕಾಲ ಧರಿಸಿರುತ್ತಾಳೆ. ಗುರುವಾದರೂ ಆಧ್ಯಾತ್ಮಿಕ ಶಿಶುವನ್ನು ಕೆಲ ಕಾಲ ತನ್ನ ಮಾನಸಿಕ ವಲಯದಲ್ಲಿಟ್ಟುಕೊಳ್ಳುವನು. ಈ ಕಾಲದಲ್ಲಿ ಶಿಷ್ಯನು, ಗರ್ಭದಲ್ಲಿಯ ಶಿಶುವಿನಂತೆ, ಗುರುವಿನ ವಿಚಾರಗಳ ಆಧ್ಯಾತ್ಮಿಕ ತರಂಗಗಳಿಂದ ಶಕ್ತಿಯನ್ನು ಹೀರಿ ಪುಷ್ಟಿಹೊಂದುವನು. ಕಾಲವೊದಗಿ ಬಂದಾಗ ಆತನು ದಿವ್ಯಲೋಕದಲ್ಲಿ ಜನಿಸುವನು. ಅಲ್ಲಿಂದ ಮುಂದೆ ಆತನ ಆಧ್ಯಾತ್ಮಿಕ ಜೀವನವು ಆರಂಭವಾಗುವುದು. ಶಿಷ್ಯನು ತನ್ನ ಸರ್ವಸ್ವವನ್ನೂ ಗುರುವಿಗೆ ಸಮರ್ಪಿಸಿ ಆತನ ಮಾನಸಿಕ ವಲಯವನ್ನು ಪ್ರವೇಶಿಸಿದ್ದಾದರೆ ಅವನಿಗೆ ದಿವ್ಯಲೋಕದಲ್ಲಿ ಜನ್ಮನೀಡಲು ಗುರುವಿಗೆ ಕೇವಲ ಏಳು ತಿಂಗಳು ಗಳು ಬೇಕಾಗುವುವು. ಆದರೆ ಗುರುವಿನ ಮಾನಸಿಕ ಕ್ಷೇತ್ರದಲ್ಲಿದ್ದಾಗ ಶಿಷ್ಯನಿಗೆ ತನ್ನ ವಿಚಾರಗಳ ಮತ್ತು ಅನುಭವಗಳ ಅರಿವು ಇನ್ನೂ ಇರುವುದ-ರಿಂದ ಸಾಮಾನ್ಯವಾಗಿ ಈ ಕ್ರಮವು ಬಹುಕಾಲದ ವರೆಗೆ ತಡೆಹಿಡಿಯಲ್ಪಡು-ತ್ತದೆ. ಇಂತು ಗುರುವಿನ ಸ್ಥಾನವು ಬಹುಮಟ್ಟಿಗೆ ತಾಯಿಯ ಹಾಗೆಂಬು ದನ್ನು ನಾವು ಕಂಡುಕೊಳ್ಳುವೆವು. ಗುರುವು ಆಧ್ಯಾತ್ಮಿಕ ಮಾತೆಯೆಂಬ ಕಲ್ಪನೆಯು ನಮ್ಮೊಳಗೆ ಆಧ್ಯಾತ್ಮಿಕ ಜೀವನದ ಮುಖ್ಯಾಂಶಗಳಾದ ಪ್ರೇಮ, ಗೌರವ ಹಾಗು ಸಮರ್ಪಣೆಯ ಭಾವನೆಗಳನ್ನು ಬೆಳೆಸುವುದು.

ಋಷಿಗಳು ಶಿಷ್ಯರನ್ನು ಮುಖ್ಯವಾಗಿ, 'ಮನ್ಮತ' ಹಾಗು 'ಗುರುಮತ' ವೆಂದು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಮೊದಲನೆಯ ರೀತಿಯ ಶಿಷ್ಯರು ಯಾವುದಾದರೊಂದು ಐಹಿಕ ಪ್ರಯೋಜನವನ್ನು ದೃಷ್ಟಿಯಲ್ಲಿರಿಸಿ-

ಕೊಂಡು ಗುರುವಿನ ಬಳಿಗೆ ಬರುವರು. ಉದಾಹರಣೆಗೆ, ಪ್ರಾಪಂಚಿಕ ದುಃಖದಿಂದ ಬಿಡುಗಡೆ, ಸಂಪತ್ತಿನ ಇಚ್ಛೆ, ಇತ್ಯಾದಿ. ನಮ್ಮ ಇಚ್ಛೆಗಳು. ಕೈಗೂಡುವುವೆಂಬ ಭರವಸೆಯಿರುವ ವರೆಗೆ ಮಾತ್ರ ಅವರು ಗುರುವಿಗೆ ಶರಣುಹೋಗುವರು. ಈ ವಿಷಯದಲ್ಲಿ ನಿರಾಶರಾದಾಗ ಅಲ್ಲಿಂದ ಕಾಲ್ದೆಗೆ ಯುವರು. ಇಂಥ ಶಿಷ್ಯರ ಬಗೆಗೆ, ಸಮರ್ಪಣೆಯಂತೂ ಹಾಗಿರಲಿ, ವಿಧೇ-ಯತೆಯ ಇಲ್ಲವೆ ಅಧೀನತೆಯ ಪ್ರಶ್ನೆ ಸಹ ಉದ್ಭವಿಸುವುದಿಲ್ಲ. ಯಾರು ಎಲ್ಲ ವಿಷಯಗಳಲ್ಲಿ ಗುರುವಿನಪ್ಪಣೆಯನ್ನು ಪಾಲಿಸುತ್ತ ಸಾಧ್ಯವಾದಷ್ಟು ಎಲ್ಲ ರೀತಿಯಿಂದಲೂ ಆತನಿಚ್ಛೆಗೆ ವಶರಾಗುವರೋ ಅವರೇ 'ಗುರುಮುತ' ಶಿಷ್ಯರು. ಆಜ್ಞಾಪಾಲನೆಯಿಂದಲೇ ಅಧೀನತೆಯು ಆರಂಭವಾಗುವುದು. ಆಧ್ಯಾತ್ಮದಲ್ಲಿ ಉನ್ನತಸಿದ್ಧಿಗಳನ್ನುಳ್ಳ ಗುರುವಿನ ಶ್ರೇಷ್ಠಶಕ್ತಿಗಳಿಂದ ನಾವು ಅತ್ಯಂತ ಪ್ರಭಾವಿತರಾದಾಗ ಆತನ ಆಜ್ಞೆಗಳನ್ನನುಸರಿಸಬೇಕೆಂಬ ಆಂತ-ರಿಕ ಒಲವನ್ನನುಭವಿಸುವೆವು. ಆದರೆ ಅನೇಕ ವೇಳೆ, ನಾವು ಆತನ ಸಾನ್ನಿಧ್ಯದಲ್ಲಿರುವಾಗ ಮಾತ್ರ ಈ ಪರಿಣಾಮವು ನಮ್ಮ ಮೇಲುಳಿಯು-ವುದು. ಆತನಿಂದ ದೂರವಾದಾಗ ಆತನ ಬಗ್ಗೆ ಅಜಾಗರೂಕರಾಗುವೆವು. ಕೆಲಕಾಲ ಪದೇಪದೇ ಆತನ ಸಹವಾಸವು ನಮ್ಮನ್ನು ಆ ಮಹಾತ್ಮ-ನೊಂದಿಗೆ ತೀರ ಹತ್ತಿರದ ಸಂಬಂಧವನ್ನುಂಟು ಮಾಡುವುದು. ಆಗ ನಮ್ಮ ಹೃದಯದಲ್ಲಿ ಆತನ ಶ್ರೇಷ್ಠತೆಯು ನೆಲೆಸಲಾರಂಭಿಸುವುದು. ಆಧ್ಯಾತ್ಮಿಕ ಪ್ರಗತಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿಯೂ ನಾವು ಆತನನ್ನು ನಮ್ಮ ಮಾರ್ಗದರ್ಶಿಯೆಂದು ಸ್ವೀಕರಿಸುವೆವು. ಇದರ ಪರಿಣಾಮವಾಗಿ ನಾವು ಆತನನ್ನು ಬಾರಿಬಾರಿಗೆ ನೆನೆಸುವೆವು. ನಮಗೆ ಆತನ ಶ್ರೇಷ್ಠ ಸಾಮರ್ಥ್ಯ-ಗಳ ಬಗ್ಗೆ ಸಂಪೂರ್ಣ ಮನವರಿಕೆಯಾದಾಗಲೇ ನಿಜವಾದ ಅರ್ಥದಲ್ಲಿ ನಮ್ಮ ಅಧೀನತೆಯು ಆರಂಭವಾಗುವುದು. ಅದನ್ನು ನಾವು ಮುಂದುವರಿಸಿ ಆತನ ಸಲಹೆಯಂತೆ ಸಾಧನೆಮಾಡುವೆವು. ನಮ್ಮ ಕೃತಿಗಳಿಂದ ಆತನನ್ನು ಸಂತೋಷಗೊಳಿಸಬೇಕೆಂದು ಯೋಚಿಸುವೆವು. ನಮ್ಮ ಹೃದಯದಲ್ಲಿ ತಪ್ಪು–ಒಪ್ಪುಗಳ ಕಲ್ಪನೆಯೂ ಪ್ರಾಮುಖ್ಯಹೊಂದಲಾರಂಭಿಸಿ ನಾವು ಕೆಡುಕಿನಿಂದ ದೂರವುಳಿಯಬೇಕೆಂಬ ಪ್ರವೃತ್ತಿಯನ್ನನುಭವಿಸುವೆವು. ಫಲ ಸ್ವರೂಪವಾಗಿ ನಮ್ಮ ಶ್ರೇಷ್ಠ ಗುರುವನ್ನು ಮೆಚ್ಚಿಸಲು ನಾವು ಸನ್ಮಾರ್ಗ-

ವನ್ನವಲಂಬಿಸುವೆವು. ಜನ್ಮಾಂತರದ ದುಃಖಗಳಿಂದ ನಾವು ಪಾರಾಗ-ಬಯಸುವೆವಾದ ಕಾರಣ ಅದು ನಮ್ಮ ಮೂಲೋದ್ದೇಶವಾಗಿರುತ್ತದೆ.

ಆದರೆ ಇದುವರೆಗೆ, ನಾವು ವಿವೇಚನೆಯ ಅಧಿಕಾರವನ್ನು ನಮ್ಮ ಕೈಯಲ್ಲಿಯೆ ಇಟ್ಟುಕೊಂಡಿರುವುದರಿಂದ ನಮ್ಮ ಎಲ್ಲ ಕರ್ಮಗಳಿಗೂ— ಒಳ್ಳೆಯವಾಗಲಿ, ಕೆಟ್ಟುವಾಗಲಿ— ನಾವೇ ಹೊಣೆಗಾರರಾಗಿರುತ್ತೇವೆ. ಆತ್ಮಸಮರ್ಪಣದ ಮೇಲಿನ ಹಂತದಲ್ಲಿ ಇಂಥ ವಿವೇಚನಶಕ್ತಿಯು ಬಹುಶಃ ಇಲ್ಲ-ದಂತಾಗಿ ಮನುಷ್ಯನು ಪ್ರತಿಯೊಂದು ಕಾರ್ಯವನ್ನೂ ಗುರುಸಂಕಲ್ಪವೆಂದು ತಿಳಿದು ಮಾಡುವನು. ಆತನ ಮನಸ್ಸಿನಲ್ಲಿ ತಪ್ಪು–ಒಪ್ಪುಗಳ ಪ್ರಶ್ನೆಯೆ ಏಳದು. ಏಕೆಂದರೆ, ಗುರುವಿನ ಇಚ್ಛೆಯನ್ನನುಸರಿಸುವುದರಿಂದ ಕೇವಲ ಯುಕ್ತವಾದುದನ್ನೇ ಮಾಡುವನೆಂಬುದು ಪೂರ್ಣ ಖಂಡಿತವಾದಂತಾಗು-ವುದು. ಆಗ ಆತನು ಗುರುಸಂಕಲ್ಪವೆಂದು ಬಗೆದು ಯುಕ್ತವಾದುದ-ನ್ನುಳಿದು ಮತ್ತೇನನ್ನೂ ಮಾಡನು.

———

## ಅಧ್ಯಾಯ: ೯

## ಸಾಕ್ಷಾತ್ಕಾರ

ಪ್ರತಿಯೊಬ್ಬನೂ ಆತ್ಮ, ಪರಮಾತ್ಮ ಮತ್ತು ಸೃಷ್ಟಿಯ ರಹಸ್ಯಗಳ ಬಗ್ಗೆ ಒಂದಿಲ್ಲೊಂದು ರೀತಿಯಲ್ಲಿ ಮಾತನಾಡುತ್ತಿರುವುದನ್ನು ನಾವು ಕೇಳುತ್ತೇವೆ. ಆದರೆ ಪರಮಾತ್ಮನ ಸಾಕ್ಷಾತ್ಕಾರ ಹೊಂದಿದವನನ್ನಾಗಲಿ ಆತನ ಬಗೆಗೆ ತಿಳಿದವನನ್ನಾಗಲಿ ಹುಡುಕಹೋದರೆ ಪ್ರಾಯಃ ಅವರಲ್ಲಿ ಒಬ್ಬನೂ ಸಿಗುವುದಿಲ್ಲ. ಬೇರೆ ಬೇರೆ ಧರ್ಮದ ಅನುಯಾಯಿಗಳಲ್ಲಿ ಸತತವಾಗಿ ಕಲಹವುಂಟಾಗಲು ಇದೇ ಕಾರಣ. ಅವರು ದೇವರ ವಿಷಯವಾಗಿ ಬಹಳ ಮಾತನಾಡುವರು; ಆದರೆ ಅಂತರ್ಯದಲ್ಲಿ ಕೇವಲ ನಾಸ್ತಿಕನಿಗಿಂತ ಯಾವ ರೀತಿಯಲ್ಲೂ ಉತ್ತಮರಾಗಿರುವುದಿಲ್ಲ. ದೇವರ ಅಸ್ತಿತ್ವವನ್ನು ಮಾತಿನಲ್ಲಿ ಒಪ್ಪಿದರೂ ಹೃದಯದಲ್ಲಿ ಆ ಬಗ್ಗೆ ಪೂರ್ಣ ನಿರ್ಲಕ್ಷ್ಯದಿಂದಿರುವಂತೆ ಕಾಣುವರು. ಅವರು ದುಃಖದಲ್ಲೋ ವಿಪತ್ತಿನಲ್ಲೋ ಇದ್ದಾಗಷ್ಟೇ ಅವರಿಗೆ ಆತನ ಉಪಯೋಗ. ಇಂಥ ಸಮಯಗಳಲ್ಲಿ ಆತನು ತಮ್ಮ ಕರೆಗೆ ಓಗೊಟ್ಟು ತಮ್ಮ ಕಷ್ಟಗಳನ್ನು ದೂರಮಾಡಬೇಕೆಂದು ಅಪೇಕ್ಷಿಸುವರು. ಮುಖ್ಯವಾಗಿ ತಮ್ಮ ಕೊರತೆಗಳ ಪೂರೈಕೆಗಾಗಿ, ಇಷ್ಟಪೂರ್ತಿಗಾಗಿ ಆತನನ್ನು ಪ್ರಾರ್ಥಿಸುವರು. ವಾಸ್ತವವಾಗಿ ಇದು ನಿಜವಾದ ಪ್ರೇಮ-ಭಕ್ತಿಗಳ ಭಾವನೆಯಿಂದ ಬಹು ದೂರವಾಗಿದೆ. ಯಾವನು ಪ್ರಾಪಂಚಿಕ ಲಾಭಗಳಿಗಾಗಿ ಇಲ್ಲವೆ ಮತ್ತಾವುದಾದರೂ ಅನುಗ್ರಹಕ್ಕಾಗಿ ಆತನನ್ನು ಪ್ರೀತಿಸದೆ ಕೇವಲ ಪ್ರೀತಿಗಾಗಿ ಪ್ರೀತಿಸುವನೋ ಆತನೇ ನಿಜವಾದ ಭಕ್ತ. ಅವನು ಯಾವಾಗಲೂ ಆತನ ಸಂಕಲ್ಪಕ್ಕೆ ಸಂಪೂರ್ಣ ಶರಣುಹೋಗುವನು. ಒಳ್ಳೆಯದಿರಲಿ, ಕೆಟ್ಟದಿರಲಿ, ಪ್ರಿಯವಿರಲಿ, ಅಪ್ರಿಯವಿರಲಿ, ತನಗೆ ದಯಪಾಲಿಸಿದುದರಲ್ಲಿ ತುಂಬಾ ಸಂತುಷ್ಟಿಯಿಂದಿರುವನು. ಸಂತೋಷ-ದುಃಖಗಳಲ್ಲಿ ಆತನಿಗೆ ಯಾವ ಅರ್ಥವೂ ಇರುವುದಿಲ್ಲ. ಪ್ರತಿಯೊಂದು ವಸ್ತುವೂ ಅವನಿಗೆ ತನ್ನ ಪ್ರಿಯತಮನಿಂದ ಬಂದ ಕಾಣಿಕೆಯಾಗಿರುವುದು. ಎಲ್ಲ

ವಿಷಯಗಳಲ್ಲಿಯೂ ಇಂಥ ಪೂರ್ಣತ್ಯಾಗ ಮತ್ತು ನಿಃಶಂಕ ಮನೋಭಾವವು ಶ್ರೇಷ್ಠಪ್ರಕಾರದ ಭಕ್ತಿಯಾಗಿದೆ. ದೇವರು ಸಂಕಲ್ಪ ಮಾಡಿದರೆ ತನಗೆ ಬೇಕಾದುದನ್ನೆಲ್ಲ ಕೊಡುವನೆಂದು ತಿಳಿದು ಯಾವಾಗಲೂ ದೇವರನ್ನೇ ಅವಲಂಬಿಸಿ ಸ್ವತಃ ಏನನ್ನೂ ಮಾಡದೆ ಸೋಮಾರಿಯಾಗಿ ಕೂಡಬೇಕೆಂ-ಬುದು ಸಮರ್ಪಣದ ಅರ್ಥವಲ್ಲ. ತಮಗೆ ತಾವು ಸಹಾಯಮಾಡಿಕೊಳ್ಳು-ವವರಿಗೆ ದೇವರು ನೆರವನ್ನು ನೀಡುವನೆಂಬುದು ಸಾಮಾನ್ಯಗಾದೆಯಿದೆ. ಅದು ಅಕ್ಷರಶಃ ಸತ್ಯ. ಇಹಪರ ಪ್ರಪಂಚಕ್ಕೆ ಸಂಬಂಧಿಸಿದ ನಮ್ಮ ಹೊಣೆ ಗಳನ್ನು ನೆರವೇರಿಸಲು ನಾವು ದುಡಿಯದಿದ್ದರೆ ನಮ್ಮ ಪವಿತ್ರ ಕರ್ತವ್ಯ ವನ್ನು ಮರೆತಂತೆಯೆ. ನಾವು ಭಗವದಿಚ್ಛೆಗನುಗುಣವಾಗಿ ಕೆಲಸಮಾಡುವೆ-ವೆಂಬುದೂ ಅದರ ಪರಿಣಾಮವೇನೇ ಆಗಲಿ, ಅದರಿಂದ ಸಂತುಷ್ಟರಾಗ-ಬೇಕೆಂಬುದೂ– ಇಷ್ಟೇ ಗಮನದಲ್ಲಿಡಬೇಕಾದ ಸಂಗತಿ. ಈ ಮಟ್ಟಕ್ಕೆ ನಾವು ಬಂದಾಗ ನಮ್ಮನ್ನು ಆ ಪರಮಗುರುವಿನ ನಿಜವಾದ ಭಕ್ತರೆಂದು, ಹಾಗು ನಾವು ಸತ್ಯದೆಡೆಗೆ ಕೊಂಡೊಯ್ಯುವ ಸರಿಯಾದ ಮಾರ್ಗದಲ್ಲಿರುವೆ-ವೆಂದು ತಿಳಿಯಲಡ್ಡಿಯಿಲ್ಲ. ಸತ್ಯವು ಭೌತಿಕ ಜ್ಞಾನೇಂದ್ರಿಯಗಳಿಗೆ ಗೋಚರ-ವಾಗುವ ವಸ್ತುವಲ್ಲ. ಅದನ್ನು ಕೇವಲ ಹೃದಯಾಂತರಾಳದಲ್ಲಿ ಮಾತ್ರ ಅನುಭವಿಸಬಹುದಾಗಿದೆ. ಆದುದರಿಂದ ನಾವು ನಮ್ಮ ಜೀವನದ ಸಮಸ್ಯೆ ಯನ್ನು ಬಿಡಿಸಬೇಕಾದರೆ ಅದರ ಆಳಕ್ಕಿಳಿಯಬೇಕು.

ಭಗವಂತನ ಭೌತಿಕ ಅಭಿವ್ಯಕ್ತಿಯೆಂದು ನಾವೆಲ್ಲರೂ ತಿಳಿದಿರುವ ಈ ವಿಶಾಲ ವಿಶ್ವದ ಕಲ್ಪನೆಯು ನಮ್ಮ ಮನಸ್ಸಿನಲ್ಲಿದೆ. ಸಾಮಾನ್ಯವಾಗಿ ನಾವು ಶಾಶ್ವತವಾದ ಪರತತ್ತ್ವದೊಂದಿಗೆ ಅದರ ಭೇದವನ್ನು ತೋರಿಸಲು ಅದನ್ನು ಮಾಯೆಯೆಂದು ತಿಳಿಯುವೆವು. ಜನರು ಮಾಯೆಯ ವ್ಯಾಖ್ಯೆಯನ್ನು ಕೊಡಲು ಹಲವಾರು ವಿಧಗಳಲ್ಲಿ ಯತ್ನಿಸಿದ್ದಾರೆ. ಇದಕ್ಕೆ ಸಮಂಜಸವಾದ ಆಧಾರಗಳಿಲ್ಲದಿಲ್ಲ. ವಸ್ತುತಃ ಅದು ವಿವಿಧ ನಾಮರೂಪಾತ್ಮಕವಾದ ಸೃಷ್ಟಿ ಯನ್ನು ರಚಿಸಿ ಅದರ ವ್ಯಾಪಾರವನ್ನು ನಿಯಂತ್ರಣಗೊಳಿಸುವ ಭಗವಚ್ಛಕ್ತಿ ಯಾಗಿದೆ. ನಾವು ಯಾವಾಗಲೂ ಈ ಮಹಾಶಕ್ತಿಯಿಂದ ಆವರಿಸಲ್ಪಟ್ಟಿದ್ದು ಅದರ ಪರಿಣಾಮವು ನಮ್ಮ ಕರ್ಮಗಳ ಎಲ್ಲ ಹಂತಗಳಲ್ಲಿಯೂ ಗೋಚರವಾ-ಗುವುದು. ನಾವು ಮಾಯೆಯ ಮೆರುಗಿನ ಸುಳಿಯಲ್ಲಿ ಸುತ್ತಾಡುತ್ತಿದ್ದು ಹಲವು

ಸಲ ಎದುರಿಗಿದ್ದ ಒಂದಿಲ್ಲೊಂದು ಪದಾರ್ಥಕ್ಕೆ, ಅದನ್ನೇ ಸತ್ಯವೆಂದು ತಿಳಿದು ಅಂಟಿಕೊಳ್ಳುವೆವು. ನಮ್ಮ ಇಂದ್ರಿಯಗಳು, ಹಾಗು ಭಾವೋದ್ವೇಗಗಳು ಅದಕ್ಕೊಂದು ಹೊಸ ಬಣ್ಣವನ್ನು ಕೊಟ್ಟು ತದನುಸಾರವಾಗಿ ನಮ್ಮ ಕರ್ಮಗಳನ್ನು ರೂಪಿಸುವುವು. ನಾವು ಮೂಲದಲ್ಲಿರುವ ಶಾಶ್ವತಸತ್ಯದ ಕಡೆಗೆ ನಮ್ಮ ದೃಷ್ಟಿಯನ್ನು ಹೊರಳಿಸುವ ವರೆಗೆ ಮಾಯೆಯ ಬಲೆಯಲ್ಲಿ, ಬಿಡುಗಡೆಯ ಯಾವ ಆಶೆಯೂ ಇಲ್ಲದೆ, ಸಿಲುಕಿಕೊಳ್ಳುವೆವು. ಮಾಯೆಯ ನೇರವಾದ ಪರಿಣಾಮವಾಗಿರುವ ಭೌತಿಕಾಭಿವ್ಯಕ್ತಿಯ ಈ ವಿಶಾಲ ವಲಯವು ಅಪರಿಮಿತವಾಗಿದೆ. ಅದರಲ್ಲಿ ನಾವು ಗಾಲಿಯ ಅಂಚಿನಂತೆ ಯಾವಾಗಲೂ ಅಚ್ಚಿನಿಂದ ದೂರದಲ್ಲಿಯೆ ಇರುತ್ತ ಬಿಡುವಿಲ್ಲದ ಗತಿಯಿಂದ ಸುತ್ತುವೆವು. ಪ್ರತಿಯೊಂದು ವರ್ತುಲಕ್ಕೂ ಕೇಂದ್ರವು ಇರಲೇಬೇಕಾದಂತೆ ಈ ಸೃಷ್ಟಿಯ ವಿಶಾಲವಾದ ವರ್ತುಲಕ್ಕೂ ಒಂದು ಕೇಂದ್ರ ಅಥವಾ ಆಧಾರವಿರಲೇಬೇಕು. ಅದನ್ನು ನಾವು ಕಂಡುಹಿಡಿಯಲು ಸಮರ್ಥರಾದರೆ ಪ್ರಾಯಶಃ ನಮ್ಮ ಸಮಸ್ಯಾಪರಿಹಾರದ ಸುಳುವು ಸಿಕ್ಕಬಹುದು. ಇಡೀ ಗಣಿತಶಾಸ್ತ್ರವು ಒಂದು ಚಿಕ್ಕ ಆಧಾರವಾದ ಶೂನ್ಯದ ಮೇಲೆ ನಿಂತಿದೆ. ಈ ಅಪರಿಮಿತ ವಿಶ್ವವು ಯಾವುದರ ಮೇಲೆ ನಿಂತಿದೆಯೋ, ಎಲ್ಲಿಂದ ಅಸ್ತಿತ್ವದ ಎಲ್ಲ ಹಂತಗಳೂ ಆರಂಭವಾಗಿರುವವೋ ಆ ಸೂಕ್ಷ್ಮ ಆಧಾರ ಅಥವಾ ಮೂಲವನ್ನು ನಾವೀಗ ಕಂಡುಹಿಡಿಯಬೇಕು. ಸೂಕ್ಷ್ಮವಾಗಿ ನಿರೀಕ್ಷಿಸಿದ್ದಾದರೆ ವರ್ತುಲದ ಕೇಂದ್ರವು ಕೂಡ ಒಂದು ಚಿಕ್ಕದಾದ ಇಲ್ಲವೆ ಸೂಕ್ಷ್ಮವಾದ ವರ್ತುಲವೇ ಆಗಿರುವುದು. ಆದುದರಿಂದ ಅದಕ್ಕೂ ಇನ್ನೊಂದು ಸೂಕ್ಷ್ಮ ಕೇಂದ್ರವಿರಲೇಬೇಕು. ಇದೇ ಕ್ರಮವು ಅನಂತದ ವರೆಗೆ ಸಾಗುವುದು. ಬೇರೆ ಶಬ್ದಗಳಲ್ಲಿ ಹೇಳುವುದಾದರೆ ಪ್ರತಿಯೊಂದು ಚಿಕ್ಕ ಅಥವಾ ಸೂಕ್ಷ್ಮ ವರ್ತುಲವು ಅದಕ್ಕಿಂದ ದೊಡ್ಡದಾದ ಹೊರಗಿನ ವೃತ್ತಕ್ಕೆ ಕೇಂದ್ರವಾಗುವುದು. ಆದರ ಆದ್ಯಂತಗಳನ್ನು ಕಂಡುಹಿಡಿಯಲು ಬುದ್ಧಿಯು ಕುಂಠಿತವಾಗುತ್ತದೆ. ಇದೇ ಪ್ರಕಾರ ಈ ಸ್ಥೂಲವಾದ ಭೌತಿಕ ವಿಶ್ವದ ಹಿಂದೆ, ಇದಕ್ಕೆ ಕೇಂದ್ರ ಅಥವಾ ಕಾರಣವಾದ ಮತ್ತೊಂದು ಸೂಕ್ಷ್ಮ ವಿಶ್ವವಿರುವುದು. ಆ ಸೂಕ್ಷ್ಮಕೇಂದ್ರಕ್ಕೆ ಮತ್ತೊಂದು ಸೂಕ್ಷ್ಮತರ ವೃತ್ತದಿಂದ ಸೂಚಿಸಲ್ಪಡುವ ಇನ್ನೊಂದು ಕೇಂದ್ರವಿರಬೇಕು. ಬೇರೆ ವಿಧದಲ್ಲಿ

ಹೇಳುವುದಾದರೆ, ನಾವು ಅಸ್ತಿತ್ವದ ಈ ಸ್ಥೂಲರೂಪಕ್ಕೆ ಬರುವ ವರೆಗೆ, ಕಲ್ಪನಾತೀತವಾದ ಆ ಸೂಕ್ಷ್ಮತಮ ಕೇಂದ್ರಬಿಂದುವಿಗೆ ಅಸಂಖ್ಯ ವೃತ್ತಗಳು ತಮ್ಮ ಸಮೀಪದ ಹೊರಗಿನ ವೃತ್ತಕ್ಕೆ ಕೇಂದ್ರವಾಗುತ್ತ ಹೋಗುವುವು. ನಾವೀಗ ಮಾಡಬೇಕಾದುದೇನೆಂದರೆ, ಸದ್ಯದ ಅಸ್ತಿತ್ವದ ಸ್ಥೂಲರೂಪದಿಂದ, ಮಾನವನು ಮುಟ್ಟಲು ಸಾಧ್ಯವಾದ ದೂರದವರೆಗೆ ಸೂಕ್ಷ್ಮಾತಿಸೂಕ್ಷ್ಮವಾದ ಹಿಂದಿನ ರೂಪಕ್ಕೆ ತಿರುಗಿ ಹೋಗಬೇಕು. ಅಸ್ತಿತ್ವದ ನಮ್ಮ ಈಗಿನ ಸ್ಥಿತಿಯಲ್ಲಿ ನಾವು ಸ್ಥೂಲತೆಯ ವಲಯದೊಳಗೆ ಸುತ್ತಲೂ ತಿರುಗುತ್ತಿರುವೆವು. ಸೂಕ್ಷ್ಮವಾದ ಮಂಡಲಗಳನ್ನು ಒಂದರ ಹಿಂದೊಂದು ದಾಟುತ್ತ ಕೇಂದ್ರ ಅಥವಾ ಮೂಲಕಾರಣದ ಕಡೆಗೆ ನಗ್ಗುವುದೊಂದೇ ನಮಗಿರುವ ಆಶಾ-ಕಿರಣ. ಅದೇ ಅಧ್ಯಾತ್ಮಶಾಸ್ತ್ರದ ಸಾರ. ಅತ್ಯಂತ ಸೂಕ್ಷ್ಮದಿಂದ ಅತ್ಯಂತ ಸ್ಥೂಲದ ವರೆಗಿನ ಇಡೀ ವಿಶ್ವದ ಮೂಲಕಾರಣವು– ಆಧಾರ ಅಥವಾ ಬಿಂದುವು— ಅದರ ಅತ್ಯಂತಭ್ಯಂತರವಾದ ಕೇಂದ್ರವಾಗಿದೆ. ನಾವದನ್ನು ದೇವರೆಂದೋ ಬ್ರಹ್ಮವೆಂದೋ ಕರೆಯಬಹುದು.

ಮನುಷ್ಯನ ರಚನೆಯಾದರೂ ವಿಶ್ವದ ರಚನೆಯಂತೆಯೆ ಇರುವುದು. ಈ ಸ್ಥೂಲವಾದ ಬಾಹ್ಯ ವಿಶ್ವದ ಹಿಂದೆ ಹೆಚ್ಚು ಹೆಚ್ಚು ಸೂಕ್ಷ್ಮವಾದ ಅಸಂಖ್ಯ ವಿಶ್ವಗಳಿರುವಂತೆ ಮನುಷ್ಯನ ಈ ಸ್ಥೂಲವಾದ ಭೌತಿಕ ರೂಪದ ಹಿಂದೆ ಅಸ್ತಿತ್ವದ ಅನೇಕ ಸೂಕ್ಷ್ಮರೂಪಗಳಿರುವುವು. ಪೂರ್ಣ ಹೊರಗಿನ ರೂಪವೇ ಈ ಸ್ಥೂಲಶರೀರ. ಇದರ ಹಿಂದೆ ಸೂಕ್ಷ್ಮಶರೀರ ಹಾಗು ಕಾರಣಶರೀರ-ಗಳಿವೆ. ಹೊರಗಿನ ಈ ಮೂರು ರೂಪಗಳ ಹಿಂದೆ ಅನೇಕಾನೇಕ ಸೂಕ್ಷ್ಮ ರೂಪಗಳಿವೆ. ಅವು ಎಷ್ಟು ಸೂಕ್ಷ್ಮವಾಗಿವೆಯೆಂದರೆ ತತ್ತ್ವಜ್ಞರು ಅವನ್ನು ಶರೀರಗಳೆಂದು ಕರೆಯದೆ ಆತ್ಮದ ಸುತ್ತಲಿರುವ ಸೂಕ್ಷ್ಮ ಆವರಣಗಳೆಂದು ಕರೆದಿದ್ದಾರೆ. ಅಸಂಖ್ಯಾತವಾದ ಅವುಗಳಿಗೆ ಪ್ರತಿಯೊಂದಕ್ಕೂ ಹೆಸರು ಕೊಡುವುದು ಕಠಿಣವಾಗಿದೆ. ಅತ್ಯಂತಸೂಕ್ಷ್ಮದಿಂದ ಅತ್ಯಂತ ಸ್ಥೂಲದ ವರೆಗಿನ ಈ ಅಗಣಿತ ರೂಪಗಳಿಂದ ಮನುಷ್ಯನು ಈ ಜಗತ್ತಿನಲ್ಲಿ ವಿಶ್ವದ ಅಥವಾ ಭಗವದಭಿವ್ಯಕ್ತಿಯ ಪ್ರತಿಕೃತಿಯಂತೆ ಅಸ್ತಿತ್ವದಲ್ಲಿರುವನು. ಇದನ್ನು, ತೀರ ಹೊರಗಿನ ಪರಿಧಿಯಿಂದ ತೀರ ಒಳಗಿನ ಕೇಂದ್ರ ಅಥವಾ ಮೂಲ ಬಿಂದುವಿನ ವರೆಗಿನ ಒಂದು ಪೂರ್ಣ ವರ್ತುಲಕ್ಕೆ ಹೋಲಿಸಲಾಗಿದೆ.

ಈಗ, ಮನುಷ್ಯನ ಅಸ್ತಿತ್ವದ ತೀರ ಒಳಗಿನ ಕೇಂದ್ರ ಅಥವಾ ಮೂಲ-ಬಿಂದುವೂ ಭಗವಂತನ ಸೃಷ್ಟಿಯ ಕೇಂದ್ರವೂ ಒಂದೇ ಆಗಿವೆ. ಭಗವತ್ಸಾ-ಕ್ಷಾತ್ಕಾರವೆಂದರೆ ಆತ್ಮಸಾಕ್ಷಾತ್ಕಾರ, ಮತ್ತು ಆತ್ಮಸಾಕ್ಷಾತ್ಕಾರವೆಂದರೆ ಭಗವಂತನ ಸಾಕ್ಷಾತ್ಕಾರ. ಶೂನ್ಯವೆಂದು ಕರೆಯಲಾದ ಒಂದೇ ಬಿಂದುವಿ-ನಿಂದ ಈ ವಿಶ್ವವೆಲ್ಲ ವಿಕಾಸಕ್ರಮದಿಂದ ಅಸ್ತಿತ್ವದಲ್ಲಿ ಬಂದಿತು. ಅದೇ ರೀತಿಯಾಗಿ ಮನುಷ್ಯನ ಅಸ್ತಿತ್ವವೂ ಅದೇ ಬಿಂದುವಿನಿಂದ ವಿಕಸಿತ ವಾಯಿತು.

ಸೃಷ್ಟಿಯ ಮೊದಲಲ್ಲಿ ಅದರ ಮೂಲಕಾರಣವು ಮಾತ್ರ ಅಸ್ತಿತ್ವದಲ್ಲಿ-ದ್ದಿತು. ನಾವಿಂದು ಕಾಣುತ್ತಿರುವ ವಿಶ್ವವೆಲ್ಲ ತನ್ನಲ್ಲಿಯ ಪ್ರತಿಯೊಂದು ವಸ್ತುವಿನ ವೈಯಕ್ತಿಕ ಸ್ವರೂಪವನ್ನು ಕಳೆದುಕೊಂಡು ಅತ್ಯಂತ ಸೂಕ್ಷ್ಮ ರೂಪದಲ್ಲಿ ಅದರೊಳಗೆ ಲೀನವಾಗಿದ್ದಿತು. ಒಂದು ಮರದ ಸಣ್ಣ ಬೀಜ ದಂತೆ, ಕೇಂದ್ರವು ಇಡೀ ವಿಶ್ವವನ್ನು ಅತ್ಯಂತಸೂಕ್ಷ್ಮರೂಪದಲ್ಲಿ ಒಳಗೊಂಡಿ ದ್ದಿತು. ಹೀಗೆ ಅದು ನಾವಿಂದು ನೋಡುತ್ತಿರುವ ವಿಸ್ತೃತಸೃಷ್ಟಿಯ ಸಂಗ್ರಹರೂಪವಾಗಿದ್ದಿತು. ಈ ಪ್ರಕಾರ, ಕೇಂದ್ರವೂ, ಸೂಕ್ಷ್ಮತಮರೂಪದ ಇಡೀ ಸೃಷ್ಟಿಯ ಅವ್ಯಕ್ತ ಚಲನಗಳೂ ಕೂಡಿಕೊಂಡು, ಸಮಯ ಬರಲು ಸೃಷ್ಟಿಗೆ ಕಾರಣವಾದುವು. ಸೃಷ್ಟಿಯ ಸಮಯದಲ್ಲಿ ಪ್ರತಿಯೊಂದು ವಸ್ತುವು ಒಂದು ಬಗೆಯ ಅಸ್ತಿತ್ವವನ್ನು ತಾಳಲಾರಂಭಿಸಿತು. ಮನುಷ್ಯನೂ ತನ್ನ ವೈಯಕ್ತಿಕ ಅಸ್ತಿತ್ವವನ್ನು ಪಡೆದನು. ಮನುಷ್ಯನ ರಚನೆಯಲ್ಲಿ ವ್ಯಕ್ತಿತ್ವದ ಅರಿವು ಮೊಟ್ಟಮೊದಲಿನ ಆವರಣವಾಯಿತು. ಮುಂದೆ ಅವು ಒಂದರ ಮೇಲೊಂದು ಹೆಚ್ಚುತ್ತ ಹೋದುವು. ಅಹಂಕಾರವು ಬೆಳೆಯುತ್ತ ಹೋಗಿ ಕೊನೆಗೆ ಸ್ಥೂಲರೂಪವನ್ನು ಪಡೆಯಿತು. ಮನಸ್ಸಿನ, ಇಂದ್ರಿಯಗಳ ಹಾಗು ಬುದ್ಧಿಶಕ್ತಿಯ ಕಾರ್ಯಗಳು ಸ್ಥೂಲತೆಯಲ್ಲಿ ಪಾಲುಗೂಡಿದುವು. ದೇಹ ಮತ್ತು ಮನಸ್ಸಿನ ಕಾರ್ಯಗಳು ಸಂಸ್ಕಾರರಚನೆಗೆ ಕಾರಣವಾದುವು. ಕೊನೆಗೆ, ಈಗ ಮನುಷ್ಯನು ಹೊರಗಿನ ಸ್ಥೂಲಶರೀರ, ಒಳಗಿನ ಸೂಕ್ಷ್ಮ ದೇಹ ಮತ್ತು ಆವರಣಗಳಿಂದೊಡಗೂಡಿದ ಸ್ಥೂಲತಮ ರೂಪದಲ್ಲಿದ್ದಾನೆ. ಅಸ್ತಿತ್ವದ ಈ ಬಾಹ್ಯಸ್ಥೂಲತೆಯ ಅವಸ್ಥೆಯಿಂದ ಒಂದರ ಹಿಂದೊಂದು ಸೂಕ್ಷ್ಮಾವಸ್ಥೆಗಳನ್ನು ದಾಟುತ್ತ ಕೇಂದ್ರದ ಕಡೆಗೆ ಈಗ ನಾವು ಸಾಗು-

ವೆವು. ಸ್ಥೂಲ ಶರೀರದಿಂದ ನಾವು ಸೂಕ್ಷ್ಮಶರೀರಕ್ಕೆ ಬರುವೆವು. ಅಲ್ಲಿಂದ ಹೆಜ್ಜೆಹೆಜ್ಜೆಗೂ ಹೆಚ್ಚು ಸೂಕ್ಷ್ಮವಾಗುತ್ತ ಕಾರಣಶರೀರಕ್ಕೆ ಬಂದು ಬೇರೆ ಆವರಣಗಳನ್ನು ಕಳಚುತ್ತ ಮುಂದಕ್ಕೆ ಸಾಗುವೆವು.

ಇದಕ್ಕಾಗಿ ಅನುಸರಿಸಲಾಗುವ ಕ್ರಮವು ಸಾಮಾನ್ಯವಾಗಿ ಮೂರು ಪ್ರಕರಣಗಳಲ್ಲಿ ವರ್ಗೀಕರಿಸಲಾಗಿದೆ— ಕರ್ಮ, ಉಪಾಸನೆ (ಭಕ್ತಿ) ಮತ್ತು ಜ್ಞಾನ. ಇವು ಬೇರೆಬೇರೆಯಾದ ಎಲ್ಲ ಧರ್ಮ–ಪಂಥಗಳಿಗೂ ಸಾಮಾನ್ಯ ತಳಹದಿಯಾಗಿವೆ. ಇದಕ್ಕಾಗಿ ಕೈಕೊಳ್ಳಲಾಗುವ ಪ್ರಾಥಮಿಕ ಸಾಧನ-ಚತುಷ್ಟಯವು ಎಲ್ಲ ಕಡೆಗೂ ಹೆಚ್ಚು ಕಡಮೆ ಒಂದೇ ಆಗಿದೆ.

ಈ ಸಾಧನಚತುಷ್ಟಯದಲ್ಲಿ ಮೊಟ್ಟಮೊದಲನೆಯದು ವಿವೇಕ. ನಾವು ಈ ಜಗತ್ತಿನಲ್ಲಿ ಅನೇಕ ಪದಾರ್ಥಗಳನ್ನು ನೋಡುವೆವು. ಆದರೆ ಅವುಗಳ ಅಸ್ತಿತ್ವವನ್ನು ಕುರಿತು ಆಲೋಚಿಸಿದಾಗ ಅವು ಪರಿವರ್ತನಶೀಲವೆಂದು, ಅರ್ಥಾತ್ ನಾವು ಸಾಮಾನ್ಯವಾಗಿ ಹೇಳುವ ಮಾಯೆಯ ಬೇರೆ ಬೇರೆ ರೂಪಗಳೆಂದು ಕಂಡುಬರುವುದು. ನಾವು ಅವುಗಳ ಕಾರಣವನ್ನು ಶೋಧಿಸಲು ಆಳಕ್ಕೆ ಇಳಿಯಲು ಪ್ರೇರೇಪಿಸಲ್ಪಡುವೆವು. ನಮ್ಮ ದೃಷ್ಟಿಯು ಹೀಗೆ ಅನಿತ್ಯಪದಾರ್ಥಗಳಿಂದ ನಿತ್ಯ ಅಥವಾ ಶಾಶ್ವತ ವಸ್ತುವಿನ ಕಡೆಗೆ ಹೊರಳು-ವುದು. ಪ್ರಾಪಂಚಿಕ ವಸ್ತುಗಳು ತಮ್ಮ ಸ್ವಾರಸ್ಯವನ್ನು ಕಳೆದುಕೊಳ್ಳ ತೊಡಗಿ ನಾವು ಅವುಗಳಿಂದ ಒಂದು ತರದ ಅಲಿಪ್ತತೆಯನ್ನನುಭವಿಸತೊಡ-ಗುವೆವು. ಇದು ನಮ್ಮನ್ನು ಸಾಧನಚತುಷ್ಟಯದಲ್ಲಿ ಎರಡನೆಯದಾದ ವೈರಾಗ್ಯಸ್ಥಿತಿಗೆ ತರುವುದು. ವೈರಾಗ್ಯವು ಬೇರೆ ಹಲವು ಕಾರಣಗಳಿಂದಲೂ ಉತ್ಪನ್ನವಾಗುವುದು. ಉದಾಹರಣೆಗಾಗಿ, ನಾವು ಪ್ರಾಪಂಚಿಕ ವಸ್ತುಗಳನ್ನು ಮನದಣಿಯೆ ಭೋಗಿಸಿ ಬೇಸತ್ತಾಗ ಅವುಗಳ ಬಗ್ಗೆ ನಾವು ಆಂತ-ರಿಕ ತಿರಸ್ಕಾರವನ್ನನುಭವಿಸತೊಡಗುವೆವು. ಇಂತಹ ಪರಿಸ್ಥಿತಿಯಲ್ಲಿ ನಮ್ಮ ದೃಷ್ಟಿಯು ಉದಾತ್ತ ಧ್ಯೇಯದ ಕಡೆಗೆ ತಿರುಗಿ ನಾವು ಭಗವದ್ವಿಚಾರದ ಬಗ್ಗೆ ಸ್ವಲ್ಪ ಜಾಗ್ರತರಾಗುವೆವು. ಎರಡನೆಯದಾಗಿ, ನಾವು ಪ್ರಪಂಚದ ಕಪಟ-ದ್ರೋಹಗಳಿಂದ ಬಹಳವಾಗಿ ನೊಂದಾಗಲೂ ನಮ್ಮಲ್ಲಿ ಪ್ರಾಪಂಚಿಕ ವಸ್ತುಗಳ ಬಗ್ಗೆ ಜುಗುಪ್ಸೆಯುಂಟಾಗಿ ಅವುಗಳಿಂದ ವಿಮುಖರಾಗುವೆವು. ನಮಗೆ ಆತ್ಮೀಯರಾದವರು ಯಾರಾದರೂ ತೀರಿಕೊಂಡುದರಿಂದುಂಟಾದ ವಿಯೋಗ

ದಲ್ಲಿ ಅತೃಪ್ತಿ ಹಾಗು ಅನಾಸಕ್ತಿಯು ಭಾವವು ಬೆಳೆಯುವುದು. ಆದರೆ ಇಂತಹ ಪರಿಸ್ಥಿತಿಗಳಲ್ಲುಂಟಾದ ವೈರಾಗ್ಯವು ನಿಜವಾದುದೂ ಬಹಳ ದಿನ ಬಾಳುವಂಥದೂ ಇರುವುದಿಲ್ಲ. ಪ್ರತಿಕೂಲ ಪರಿಸ್ಥಿತಿಗಳು ಬದಲಾಯಿಸಿದ ಕೂಡಲೇ ಅದು ಮಾಯವಾಗುವುದು. ಈಬಗ್ಗೆ ಒಂದು ಕತೆಯಿದೆ. ಒಮ್ಮೆ ಒಬ್ಬ ಮನುಷ್ಯನು ಕಬೀರದಾಸನನ್ನು ಕಾಣಬಯಸಿದ. ಅವನು ಆತನ ಮನೆಯನ್ನು ತಲುಪಿದಾಗ ಕಬೀರನು, ತನ್ನ ಆಪ್ತ-ರೊಬ್ಬರು ತೀರಿಕೊಂಡುದರಿಂದ ಶವಸಂಸ್ಕಾರಕ್ಕಾಗಿ ಶ್ಮಶಾನಕ್ಕೆ ಹೋಗಿ ರುವನೆಂದು ತಿಳಿದು ಬಂದಿತು. ಆ ಮನುಷ್ಯನು ಕಬೀರನನ್ನು ಶ್ಮಶಾನ-ದಲ್ಲಿಯೆ ಕಾಣಲು ಅತ್ತ ಕಡೆಗೆ ಹೊರಟನು. ಆದರೆ ಆತನು ಕಬೀರನನ್ನು ಹಿಂದೆಂದೂ ನೋಡದಿದ್ದ ಕಾರಣ ಜನರ ಗುಂಪಿನಲ್ಲಿ ಅವನನ್ನು ಗುರುತಿಸು ವುದು ಕಠಿಣವೆಂದು ಭಾವಿಸಿದನು. ಇದಕ್ಕಾಗಿ ಅವನಿಗೊಂದು ಗುರುತನ್ನು ಹೇಳಿಕೊಡಲಾಯಿತು. ಶ್ಮಶಾನದ ಕಡೆಗೆ ಹೋಗುವಾಗ ಎಲ್ಲರ ಮುಖದ ಮೇಲೂ ಒಂದು ತರದ ತೇಜವನ್ನು ಕಾಣಬಹುದೆಂದೂ, ಮನೆಗೆ ಮರಳು-ವಾಗ ಅದು ಕ್ರಮೇಣ ಮಸಕಾಗುತ್ತ ಕೊನೆಗೆ ಮಾಯವಾಗಿರುತ್ತದೆಂದೂ, ಕೇವಲ ಕಬೀರದಾಸನ ಮುಖದ ಮೇಲಷ್ಟೆ ಅದು ಒಂದೇಸವನೆ ಹೊಳೆಯು-ತ್ತಿರುವುದೆಂದೂ ಆತನಿಗೆ ಹೇಳಲಾಗಿತ್ತು. ಈ ಪ್ರಕಾರ, ಇಂಥ ಆಕಸ್ಮಿಕ ಕಾರಣಗಳಿಂದುಂಟಾದ ವೈರಾಗ್ಯಭಾವವು ತಾತ್ಕಾಲಿಕವಾಗಿದ್ದು ಪರಿಸ್ಥಿತಿ ಗಳು ಬದಲಾದಾಗ ಅದೂ ಬದಲಾಗುವುದು. ಏಕೆಂದರೆ, ಅಕಸ್ಮಾತ್ತಾದ ಆಘಾತಗಳು ತಾತ್ಕಾಲಿಕ ವೈರಾಗ್ಯವನ್ನು ಹುಟ್ಟಿಸಿದರೂ ಹೃದಯದಲ್ಲಿ ಭೋಗದ ಹಾಗು ಬಯಕೆಯ ಬೀಜವು ಆಳವಾಗಿ ಹುದುಗಿದ್ದು ಅನುಕೂಲ ಪರಿಸ್ಥಿತಿಯುಂಟಾದ ಕೂಡಲೆ ಅಂಕುರಿಸುವುದು. ನಿಜಾರ್ಥದಲ್ಲಿ ಶಾಶ್ವತ ವಾದ ವೈರಾಗ್ಯಭಾವವನ್ನು ಮಿತತ್ವದ ಮೂಲಕ ಆಮೂಲಾಗ್ರ ಶುದ್ಧೀಕರಣ ದಿಂದಲೇ ಬೆಳೆಸಲು ಸಾಧ್ಯವಾಗುವುದು.

ವೇದಾಂತಿಗಳು ವೈರಾಗ್ಯವನ್ನು ಬೇರೆ ರೀತಿಯಲ್ಲಿ ಅಭ್ಯಸಿಸುವರು. ತಾವು ನೋಡುವುದೆಲ್ಲವೂ ಮಾಯೆಯಾದುದರಿಂದ ಕ್ಷಣಿಕ ಅಥವಾ ಮಿಥ್ಯೆ-ಯೆಂಬ ಕಲ್ಪನೆಯನ್ನು ಪ್ರಯತ್ನಪೂರ್ವಕವಾಗಿ ನಂಬಿ ಅಡಿಯಲ್ಲಿರುವ ಸತ್ಯ ವಸ್ತುವನ್ನು ಬ್ರಹ್ಮವೆಂದು ನಿಶ್ಚಯಿಸುವರು. ಈ ಕಲ್ಪನೆಯನ್ನು ಬಲಗೊಳಿ-

ಸಲು ಅವರು ತಮ್ಮ ಸಂಕಲ್ಪಶಕ್ತಿಯನ್ನುಪಯೋಗಿಸುವರು. ಆದರ ಪರಿಣಾಮವಾಗಿ ಅವರಿಗದು ರೂಢಿಯಾಗಿ ಕೇವಲ ಬಾಹ್ಯಕರ್ಮಗಳಲ್ಲಷ್ಟೇ ಬದಲಾವಣೆ ತಲೆದೋರುವುದು. ಆದುದರಿಂದ ಆದರ ಪರಿಣಾಮವು ಹೊರಗಷ್ಟೆ ಆಗುವುದು. ದೀರ್ಘಕಾಲದ ಸತತಾಭ್ಯಾಸದಿಂದ ಅದು ಒಳಗೂ ಕಿಂಚಿತ್ ಪ್ರತಿಬಿಂಬಿಸಬಹುದು. ಅದರಂತೆಯೆ ಅನುಭವದ ಸೋಂಕಿಲ್ಲದ ಹಾಗು ಕೇವಲ ಕಲ್ಪನಾಬಲದಿಂದ ಪ್ರಚೋದಿತವಾದ ವಿವೇಕವಾದರೂ ಭದ್ರವಾಗಿರುವುದಿಲ್ಲ. ವಿವೇಕ-ವೈರಾಗ್ಯಗಳು ನಿಜವಾಗಿಯೂ ಸಾಧನಗಳಾಗಿರದೆ ಹಲವು ಸಾಧನಗಳ ಪರಿಣಾಮವೆಂಬುದು ಈ ವಿಷಯದ ಸೂಕ್ಷ್ಮಾಭ್ಯಾಸದಿಂದ ತಿಳಿದುಬರುವುದು. ವಿವೇಕವಾಗಲಿ ವೈರಾಗ್ಯವಾಗಲಿ, ಸ್ಮರಣೆ, ಭಕ್ತಿ ಅಥವಾ ಪ್ರೇಮ ಮುಂತಾದ ಯೌಗಿಕ ಸಾಧನಗಳ ಸತತಾಭ್ಯಾಸದಿಂದ ಬೇರೆ ಬೇರೆ ಹಂತಗಳಲ್ಲಿ ಬೆಳೆಸಲಾದ ಒಂದು ಮಾನಸಿಕಸ್ಥಿತಿಯಾಗಿದೆ. ಇಂದ್ರಿಯಗಳು ಪೂರ್ಣವಾಗಿ ಶುದ್ಧವಾಗದ ಹೊರತು ನಿಜವಾದ ವಿವೇಕವು ಬೆಳೆಯುವುದಿಲ್ಲ. ಮನಸ್ಸು ಸುಶಿಕ್ಷಿತವೂ ಸುನಿಯಂತ್ರಿತವೂ ಆಗಿ ಅಹಂಕಾರವು ಪರಿಶುದ್ಧಸ್ಥಿತಿಯನ್ನು ಹೊಂದದ ಹೊರತು ಇಂದ್ರಿಯಗಳು ಶುದ್ಧವಾಗಲಾರವು. ಈ ಪ್ರಕಾರ, ವಿವೇಕವು ಇಷ್ಟಪರಿಣಾಮವನ್ನು ತಂದುಕೊಳ್ಳಲು ಅನುಸರಿಸಲಾಗುವ ಸಾಧನಗಳ ಫಲವಾಗಿದೆ. ಅದೇ ರೀತಿ ವೇದಾಂತಿಗಳ ಎರಡನೆಯ ಸಾಧನವಾದ ವೈರಾಗ್ಯವಾದರೂ ವಿವೇಕದ ಪರಿಣಾಮವಾಗಿದೆ. ಹೀಗೆ, ಅವು ಯೋಗದ ಪ್ರಾಥಮಿಕ ಸಿದ್ಧಿಗಳ ಮಜಲುಗಳಾಗಿವೆಯಲ್ಲದೆ ಮಜಲುಗಳನ್ನು ಮುಟ್ಟುವ ಸಾಧನಗಳಲ್ಲ. ಯೋಗದ ಸಹಜಮಾರ್ಗಪದ್ಧತಿಯಲ್ಲಿ ವಿವೇಕ-ವೈರಾಗ್ಯಗಳನ್ನು ಪ್ರತ್ಯೇಕ ಸಾಧನಗಳೆಂದು ಗಣಿಸದೆ, ಸಾಧಕನ ಪ್ರಗತಿಯಲ್ಲಿ ತಾವಾಗಿಯೆ ಬೆಳೆದು ಬರಬೇಕೆಂಬ ದೃಷ್ಟಿಯಿಂದ ಅವುಗಳನ್ನು ಬದಿಗಿರಿಸಲಾಗುವುದು. ಆರುವಿಧವಾದ ಆಧ್ಯಾತ್ಮಿಕಸಿದ್ಧಿಗಳನ್ನೊಳಗೊಂಡ ಷಟ್ಸಂಪತ್ತಿಯೆಂಬ ವೇದಾಂತಿಗಳ ತೃತೀಯ ಸಾಧನದಿಂದ ಸಹಜಮಾರ್ಗವು ಆರಂಭವಾಗುವುದು. ಇವುಗಳಲ್ಲಿ ಮೊಟ್ಟಮೊದಲನೆಯದು ಶಮ. ಇದು ಮನಸ್ಸನ್ನು ಸ್ವಸ್ಥ ಮತ್ತು ಶಾಂತ ಸ್ಥಿತಿಗೆ ತರುವುದು. ಇದರ ಅಭ್ಯಾಸ ಮಾಡಿದಾಗ ವಿವೇಕ–ವೈರಾಗ್ಯಗಳು ತಾವಾಗಿಯೆ ಸಾಧಿಸಲ್ಪಡುವುವು. ವಸ್ತುಗಳ ಅಭಾವಾರ್ಥದಲ್ಲಿಯ ವೈರಾಗ್ಯವು

ನನ್ನ ಅಭಿಪ್ರಾಯದ ಮೇರೆಗೆ ಬಹಳ ಕಠಿಣವಾದುದು. ಏಕೆಂದರೆ, ಅದರಲ್ಲಿ ನಿವೃತ್ತಿಮಾರ್ಗವನ್ನವಲಂಬಿಸಿ ನಿಮ್ಮ ದೃಷ್ಟಿಗೆ ಬೀಳುವುದೆಲ್ಲವನ್ನೂ ನಿರಾಕರಿಸಬೇಕಾಗುವುದು. ಆದರೆ ನೀವು ನಿರ್ದಿಷ್ಟವಾದ ಒಂದು ದೃಷ್ಟಿಯನ್ನಿಟ್ಟುಕೊಂಡು ಒಂದೇ ಸತ್ಯವಸ್ತುವನ್ನಂಗೀಕರಿಸಿ ಅದಕ್ಕೇ ಮನಃಪೂರ್ವಕವಾಗಿ ಅಂಟಿಕೊಂಡುದಾದರೆ ಉಳಿದ ವಸ್ತುಗಳೆಲ್ಲ ಸ್ವಾಭಾವಿಕವಾಗಿಯೆ ಹಿಂದೆ ಸರಿದು ಕ್ರಮೇಣ ನೀವು ಅವುಗಳ ಬಗ್ಗೆ ಅನಾಸ್ಥೆ ವಹಿಸುವಿರಿ. ಅದರ ಪರಿಣಾಮವಾಗಿ ಅವುಗಳ ವಿಷಯಕವಾದ ನಿಮ್ಮ ಆಸಕ್ತಿಯು ಕ್ರಮೇಣ ಮಾಯವಾಗತೊಡಗಿ ನೀವು ವೈರಾಗ್ಯವನ್ನು ಅತ್ಯಂತ ಸುಲಭೋಪಾಯದಿಂದ ಸಂಪಾದಿಸುವಿರಿ. ಈ ಪ್ರಕಾರ, ಯಾವಾಗಲೂ ಹೊಯ್ದಾಡುವ ಮನಸ್ಸಿನ ಯೋಗ್ಯ ನಿಯಂತ್ರಣವೇ ಯೋಗದಲ್ಲಿ ಮುಖ್ಯವಾಗಿದೆ. ಅದು ಅಸಂಖ್ಯ ಕಲ್ಪನೆ ಹಾಗು ವಿಚಾರಗಳನ್ನು ಸೃಷ್ಟಿಸುವುದು; ಇಂದ್ರಿಯಗಳಿಗೆ ಪ್ರೇರಣೆಯನ್ನೀಯುವುದು; ಮತ್ತು ಶರೀರವನ್ನು ಕರ್ಮದಲ್ಲಿ ತೊಡಗಿಸುವುದು. ಪ್ರತಿಯೊಂದು ಒಳ್ಳೆಯದು ಹಾಗು ಕೆಟ್ಟದು ಮನಸ್ಸಿನಿಂದಲೇ ಉದ್ಭವಿಸುವುದು. ಮತ್ತು ನಮ್ಮ ಎಲ್ಲ ಅನಿಸಿಕೆಗಳಿಗೂ ಉದ್ವೇಗಾವೇಗಗಳಿಗೂ ಮನಸ್ಸೇ ಕಾರಣವಾಗಿದೆ. ಮನಸ್ಸಿನ ವೃತ್ತಿಗಳನ್ನು ತತ್ತ್ವಜ್ಞರು ಐದು ವಿಧವಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ಮೊದಲನೆಯದಾದ 'ಕ್ಷಿಪ್ತ'ವು ಹಸಿವು, ನೀರಡಿಕೆ, ಕೋಪ, ದುಃಖ, ಕೀರ್ತಿ–ಕಾಂಚನಗಳ ಆಸೆ ಮುಂತಾದ ಎಲ್ಲ ಬಗೆಯ ಮನಸ್ಸಿನ ಪ್ರಕ್ಷುಬ್ಧ ಸ್ಥಿತಿಗಳನ್ನೊಳಗೊಳ್ಳುತ್ತದೆ. ಎರಡನೆಯದಾದ 'ಮೂಢ' ವೃತ್ತಿಯು ಆಲಸ್ಯ, ಸೋಮಾರಿತನ ಅಥವಾ ಜಡತೆಯನ್ನೊಳಗೊಳ್ಳುವುದು. ಮೂರನೆಯದಾದ 'ವಿಕ್ಷಿಪ್ತ'ವು ನಮ್ಮ ಮನಸ್ಸನ್ನು ಪವಿತ್ರ ವಿಚಾರಗಳಿಂದ ದೂರವೊಯ್ದು ಧ್ಯಾನ ಸಮಯದಲ್ಲಿ ಅಸಂಖ್ಯವಾದ ಅಸಂಬದ್ಧ ಕಲ್ಪನೆಗಳನ್ನು ಹುಟ್ಟಿಸುವ ವೃತ್ತಿಗೆ ಸಂಬಂಧಪಟ್ಟುದು. ನಾಲ್ಕನೆಯದಾದ 'ಏಕಾಗ್ರ'ವು ಒಂದೇ ವಸ್ತುವಿನ ಮೇಲೆ ನಮ್ಮ ಲಕ್ಷ್ಯವನ್ನಿಡುವಂತೆ ಮಾಡುವ ವೃತ್ತಿ. ಕೊನೆಯದಾದ 'ನಿರೋಧ'ವು ಯಾವ ವಿಧವಾದ ತೊಡಕುಗಳೂ ಕ್ಷೋಭವೂ ಇಲ್ಲದ ಮನಸ್ಸಿನ ಪೂರ್ಣ ಸ್ವಸ್ಥ ವೃತ್ತಿ. ಈ ಕೊನೆಯ ಸ್ಥಿತಿಯನ್ನು ಹೊಂದಲು ಋಷಿಗಳು ಸಾಮಾನ್ಯವಾಗಿ ಅಷ್ಟಾಂಗಯೋಗವನ್ನು (ಯಮ, ನಿಯಮ, ಆಸನ, ಪ್ರಾಣಾಯಾಮ,

ಪ್ರತ್ಯಾಹಾರ, ಧಾರಣ ಧ್ಯಾನ ಮತ್ತು ಸಮಾಧಿ) ವಿಧಿಸಿದ್ದಾರೆ. ಸಹಜ-ಮಾರ್ಗ ಪದ್ಧತಿಯ ತರಬೇತಿಯಲ್ಲಿ ನಾವು ಯೋಗದ ಏಳನೆಯ ಅಂಗವಾದ ಧ್ಯಾನದಿಂದ ಪ್ರಾರಂಭಿಸುವೆವು. ಧ್ಯಾನವನ್ನು ಅಭ್ಯಾಸ ಮಾಡಲು ನಮ್ಮ ಮನಸ್ಸನ್ನು ಒಂದೇ ಧ್ಯೇಯದಮೇಲೆ ಸ್ಥಿರಗೊಳಿಸುವೆವು. ಮೊದಲಿನ ಅಂಗಗಳನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳಲಾಗುವುದಿಲ್ಲ. ಆದರೆ ನಾವು ಧ್ಯಾನದಲ್ಲಿ ಮುಂದುವರಿದಂತೆ ಅವು ತಾವಾಗಿಯ ಆಚರಣೆಯಲ್ಲಿ ಬರುವವು. ಹೀಗೆ, ಈ ಉಪಾಯದಿಂದ ನಮಗೆ ಬಹಳಷ್ಟು ಸಮಯ ಹಾಗು ದುಡಿಮೆಯ ಉಳಿತಾಯವಾಗುವುದು.

ಸಂಕ್ಷೇಪವಾಗಿ ಹೇಳುವುದಾದರೆ, ನಾವು ವೇದಾಂತಿಗಳ ಮೂರ-ನೆಯ ಸಾಧನವಾದ ಷಟ್‌ಸಂಪತ್ತಿಗಳಲ್ಲೊಂದಾದ ಶಮ:ದಿಂದ ನಮ್ಮ ಅಭ್ಯಾಸವನ್ನಾರಂಭಿಸಿ ನಮ್ಮ ಎಲ್ಲ ಲಕ್ಷ್ಯವನ್ನೂ ಮನಸ್ಸಿನ ಯೋಗ್ಯ ನಿಯಂತ್ರಣ ಮತ್ತು ರೂಪಣಗಳಿಗಾಗಿ ವಿನಿಯೋಗಿಸುವೆವು. ಇದು ಯೋಗ್ಯ ಗುರುವಿನ ಪ್ರಾಣಾಹುತಿಯ ಸಹಾಯದಿಂದ ಸುಲಭವಾಗಿ ಸಾಧಿಸಲ್ಪಡು-ವುದು. ಉಳಿದ ಎಲ್ಲ ವಸ್ತುಗಳನ್ನೂ ಕಡೆಗಣಿಸಿ ನಮ್ಮ ಲಕ್ಷ್ಯವನ್ನು ಒಂದೇ ಒಂದಾದ ಸತ್ಯವಸ್ತುವಿನ ಮೇಲೆ ಸ್ಥಿರಗೊಳಿಸಿದಾಗ ಇಂದ್ರಿಯಗಳ ನಿಗ್ರಹ ( ದಮ )ವು ತಾನಾಗಿಯೆ ಸಂಪನ್ನವಾಗುವುದು. ಬಹುಶಃ ಋಷಿ-ಗಳೆಲ್ಲರೂ ಸಾಮಾನ್ಯವಾಗಿ ಈ ಕ್ರಮವನ್ನನುಸರಿಸಿರುವರು. ಹಲವು ಸಂಪ್ರ-ದಾಯದವರು ಕರ್ಮದ ಮೂಲಕವಾಗಿಯೂ ಇತರರು ಭಕ್ತಿಯ ಮೂಲಕ ವಾಗಿಯೂ ಶಮವನ್ನು ಸಾಧಿಸ:ವರು. ಮತ್ತೆ ಕೆಲವರು ಇವೆರಡನ್ನೂ ಬದಿ ಗಿರಿಸಿ ಜ್ಞಾನದ ಮುಖಾಂತರವಾಗಿ ಮುಂದುವರಿಯುವರು. ವಸ್ತುತಃ ಕರ್ಮ, ಉಪಾಸನೆ ಹಾಗು ಜ್ಞಾನಗಳು ಒಂದರಿಂದೊಂದು ಭಿನ್ನವಾಗಿರದೆ ಪರಸ್ಪರ ಸಂಬಂಧಪಟ್ಟವಾಗಿದ್ದು ಒಂದೇ ಸ್ಥಿತಿಯಲ್ಲಿ ಮೂರೂ ಒಟ್ಟುಗೂಡಿ ರುವುವು. ಉದಾಹರಣೆಗಾಗಿ, ಭಕ್ತಿ (ಉಪಾಸನೆ)ಯಲ್ಲಿ ಮನೋನಿಗ್ರಹವು ಕರ್ಮವೂ, ಮನಸ್ಸಿನ ನಿಗ್ರಹೀತ ಸ್ಥಿತಿಯು ಉಪಾಸನೆಯೂ ಅದರ ತಿಳಿವಳಿ-ಕೆಯು ಜ್ಞಾನವೂ ಆಗಿದೆ. ಜ್ಞಾನದಲ್ಲಿ ವಿಚಾರದ ಕ್ರಿಯೆಯು ಕರ್ಮವೂ, ವಿಚಾರಮಾಡಿದ ವಸ್ತುವಿನ ಮೇಲಿನ ನಮ್ಮ ಅವಸ್ಥಾನವು ಉಪಾಸನೆಯೂ, ಇದರ ಪರಿಣಾಮಸ್ವರೂಪವಾದ ಸ್ಥಿತಿಯು ಜ್ಞಾನವೂ ಆಗಿದೆ. ಕರ್ಮದಲ್ಲಿ,

ಕಾರ್ಯದ ಬಗೆಗಿನ ನಿರ್ಧಾರವು ಕರ್ಮವೂ, ಅದನ್ನು ಆಚರಣೆಯಲ್ಲಿ ತರುವ ಕ್ರಮವು ಉಪಾಸನೆಯೂ, ಸಿದ್ಧಿಯ ಅರಿವು ಜ್ಞಾನವೂ ಆಗಿದೆ. ಈ ಪ್ರಕಾರ, ನಮ್ಮ ತರಬೇತಿಯ ಪದ್ಧತಿಯಲ್ಲಿ ಇವೆಲ್ಲವನ್ನೂ ಅತ್ಯಂತ ದಕ್ಷತೆಯಿಂದ ಒಟ್ಟಿಗೆ ತೆಗೆದುಕೊಳ್ಳಲಾಗುವುದರಿಂದ ನಿಜಾರ್ಥದಲ್ಲಿ ವಿವೇಕ-ವೈರಾಗ್ಯಗಳ ಸ್ಥಿತಿಯು ತಾನಾಗಿಯೆ ಉಂಟಾಗುವುದು. ಸಹಜಗತಿಯಲ್ಲಿ ವಿವೇಕ-ವೈರಾಗ್ಯಗಳನ್ನುಂಟುಮಾಡದ ಯಾವ ಅಭ್ಯಾಸವೂ ಪ್ರಯೋಜನಕಾರಿಯಲ್ಲ. ಮನುಷ್ಯನು ತನ್ನ ಲೋಪ–ದೋಷಗಳನ್ನು ಅರಿತುಕೊಂಡು ಹೃದಯಾಂತ-ರಾಳದಲ್ಲಿ ಅವುಗಳಿಗಾಗಿ ಪಶ್ಚಾತ್ತಾಪಪಡುವುದೇ ವಿವೇಕದ ನಿಜಸ್ವರೂಪ.

ನಾವು ಮೊದಲಿನ ಎರಡು ಸಂಪತ್ತಿಗಳ ಬಗ್ಗೆ ತಿಳಿದುಕೊಂಡೆವು. ಈಗ ಮೂರನೆಯದಾದ 'ಉಪರತಿ'ಗೆ ಬರೋಣ. ಉಪರತಿಯೆಂದರೆ ಹಿಂದಕ್ಕೆ ಸರಿ-ಯುವುದು. ಈ ಸ್ಥಿತಿಯಲ್ಲಿ ಮನುಷ್ಯನು ಪರಲೋಕಕ್ಕೆ ಸಂಬಂಧಪಟ್ಟವು-ಗಳನ್ನೊಳಗೊಂಡ ಎಲ್ಲ ಇಚ್ಛೆಗಳಿಂದಲೂ ಮುಕ್ತನಾಗಿರುವನು. ಆತನು ಜಗತ್ತಿನ ಯಾವ ವಸ್ತುವಿನಿಂದಲೂ ಆಕೃಷ್ಟನಾಗಲಾರನು. ಆತನ ಮನಸ್ಸು ಯಾವಾಗಲೂ ಒಂದರಲ್ಲೇ— ಸತ್ಯದಲ್ಲೇ— ಕೇಂದ್ರೀಕೃತವಾಗಿರುತ್ತದೆ. ಅದು ವೈರಾಗ್ಯದ ಸ್ಥಿತಿಯಿಂದ ಈ ರೀತಿಯಲ್ಲಿ ಬೇರೆಯಾಗಿರುತ್ತದೆ: ವೈರಾಗ್ಯವು ಪ್ರಾಪಂಚಿಕ ವಸ್ತುಗಳಲ್ಲಿ ತಿರಸ್ಕಾರವನ್ನುಂಟುಮಾಡಿದರೆ ಉಪರತಿಯಲ್ಲಿ ಆಕರ್ಷಣೆ ಹಾಗು ಜುಗುಪ್ಸೆ— ಇವೆರಡೂ ಭಾವನೆಗಳು ಲೋಪವಾಗಿರುತ್ತವೆ. ವೈರಾಗ್ಯವು ನಿಜವಾಗಿಯೂ ಈ ಉಚ್ಚತರ ಸ್ಥಿತಿಯ ಅಪೂರ್ಣವಾದ ರೂಪವಾಗಿದೆ. ಈ ಸ್ಥಿತಿಯಲ್ಲಿ ನಮ್ಮ ಇಂದ್ರಿಯ ಗಳೂ ಸಂವೇದನೆಗಳೂ ಪೂರ್ಣಶುದ್ಧವಾಗಿರುತ್ತವೆ. ನಾವು ಎಲ್ಲ ಬಾಹ್ಯವಸ್ತು ಗಳಿಂದ ಬೇಸತ್ತು ಅವು ಗಮನಾರ್ಹವಲ್ಲವೆಂದು ಭಾವಿಸಿ ಅವುಗಳಿಂದ ಸಂಬಂಧವನ್ನು ಕಡಿದುಕೊಳ್ಳುವೆವು. ಪ್ರಪಂಚದ ಆಸಕ್ತಿಯ ಪರಿಣಾಮ ದಿಂದ ನಾವು ಮುಕ್ತರಾಗುವೆವು. ಸ್ವರ್ಗದ ಸುಖವು ಕೂಡ ಇಂಥ ಮನುಷ್ಯ ನಿಗೆ ಯಾವ ಮೋಹವನ್ನೂ ಉಂಟುಮಾಡದು. ಮೋಕ್ಷ ಅಥವಾ ಶಾಶ್ವತ ಮುಕ್ತಿಯಂಥ ಉನ್ನತ ಆದರ್ಶಗಳಿಂದ ಕೂಡ ಆತನು ಆಕೃಷ್ಟನಾಗ ಲಾರನು.

ನಾಲ್ಕನೆಯ ಸಂಪತ್ತಿಯು ತಿತಿಕ್ಷೆ ಅಥವಾ ಮನಃಸ್ಥೈರ್ಯ. ಈ ಹಂತದಲ್ಲಿ ಮನುಷ್ಯನು ತನಗೆ ದೇವರು ಕೊಟ್ಟುದರಲ್ಲಿ ಪೂರ್ಣ ತೃಪ್ತಿ-

ಯಿಂದಿರುವನು. ಆತನಿಗೆ ಮಾನಾಪಮಾನಗಳ, ಹರ್ಷಾಮರ್ಷಗಳ ಅನಿಸಿಕೆಯಿರುವುದಿಲ್ಲ.

ಐದನೆಯದು ಶ್ರದ್ಧೆ. ಇದೊಂದು ಉಚ್ಚ ಸಿದ್ಧಿ. 'ಶ್ರದ್ಧೆ'ಯೆಂಬ ಅಧ್ಯಾಯದಲ್ಲಿ ನಿರೂಪಿಸಲಾದಂತೆ ಪ್ರಾರಂಭದ ಕೃತಕಶ್ರದ್ಧೆಯಿಂದ ಇದು ತೀರ ಭಿನ್ನವಾಗಿದೆ.

ಕೊನೆಯದು ಸಮಾಧಾನ. ಇದು ಗುರುವಿನ ಇಚ್ಛೆಗೆ— ಅರಿವು ಕೂಡ ಇರದಂತೆ — ಹೊಂದಿಕೊಂಡಿರುವ ಸ್ಥಿತಿ. ಈ ಮಜಲಿನಲ್ಲಿ ಮನುಷ್ಯನು ಯಾವ ಅನ್ಯಭಾವನೆಯೂ ಇಲ್ಲದೆ ಶ್ರೇಷ್ಠ ಗುರುವಿಗೆ ತನ್ನನ್ನು ಸಮರ್ಪಿಸಿಕೊಂಡಿರುವನು.

ಈ ಪ್ರಕಾರ ನಾವು ಮೂರನೆಯ ಸಾಧನದ ಬೇರೆ ಬೇರೆ ಸಿದ್ಧಿಗಳನ್ನು ಕುರಿತು ವಿವೇಚನೆ ಮಾಡಿದೆವು. ಈಗ ನಾವು ಸಾಧನಚತುಷ್ಟಯದಲ್ಲಿ ಕೊನೆಯದಾದ 'ಮುಮುಕ್ಷತ್ವ'ಕ್ಕೆ ಬರುವೆವು. ಈ ಹಂತಕ್ಕೆ ಬಂದಮೇಲೆ ಕೇವಲ ಸತ್ಯದೊಂದಿಗೆ ಗಾಢಸಂಪರ್ಕ ಬೆಳೆಸುವುದನ್ನುಳಿದು, ಇಲ್ಲವೆ ಶೂನ್ಯಾವಸ್ಥೆಯಲ್ಲಿ ಪೂರ್ಣ ಲಯವಾಗುವುದನ್ನುಳಿದು ಬೇರೇನೂ ಸಾಧಿಸುವುದುಳಿಯುವುದಿಲ್ಲ. ಇದು ಸಾಕ್ಷಾತ್ಕಾರದ ಪ್ರತ್ಯಕ್ಷ ನೆಲೆಯಾಗಿದ್ದು ಯೋಗದ ಹಳೆಯ ಪದ್ಧತಿಯ ಪ್ರಕಾರ, ಪ್ರಾಥಮಿಕ ಸಾಧನಗಳ ಮನಃಪೂರ್ವಕ ಅಭ್ಯಾಸದಿಂದ ಪ್ರಾಪ್ತವಾಗುವುದು. ಆಧುನಿಕ ಪದ್ಧತಿಯಾದ ಸಹಜಮಾರ್ಗವು ಹಳೆಯ ದಾರಿಯಿಂದ ಯಾವ ರೀತಿಯಲ್ಲಿ ಕವಲೊಡೆಯುವುದೆಂದರೆ,ಅಷ್ಟಾಂಗಯೋಗದ ಬೇರೆ ಬೇರೆ ಸೋಪಾನಗಳಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳುವುದಿಲ್ಲ. ಈ ಪದ್ಧತಿಯಲ್ಲಿ ಆಸನ, ಪ್ರಾಣಾಯಾಮ, ಧ್ಯಾನ, ಧಾರಣ ಮತ್ತು ಸಮಾಧಿಗಳನ್ನು ಏಕಕಾಲಕ್ಕೆ ಧ್ಯಾನಕ್ರಮದಲ್ಲಿ ತೆಗೆದುಕೊಳ್ಳಲಾಗುವುದು. ಧ್ಯಾನವು ಕ್ರಮೇಣ ಏಕಾಗ್ರತೆ ಅಥವಾ ಸಮಾಧಿಯನ್ನು ತರುವುದು. ಹೀಗೆ, ನಾವು ಯೋಗದ ಕೊನೆಯ ಸೋಪಾನವಾದ ಸಮಾಧಿಯತ್ತ ಸಹಜಗತಿಯಲ್ಲಿ ಸಾಗುವೆವು.

ಸಮಾಧಿಯ ಬಗೆಗಳು ಅಥವಾ ಏಕಾಗ್ರತೆಯ ಹಂತಗಳು ಮೂರು. ಮೊದಲನೆಯದರಲ್ಲಿ ಮನುಷ್ಯನು ತಲ್ಲೀನನಾದಂತೆ ಅನುಭವಿಸುವನು. ಆತನ ಸಂವೇದನೆಗಳು, ಅನಿಸಿಕೆಗಳು ಹಾಗು ಭಾವಗಳು ತಾತ್ಕಾಲಿಕವಾಗಿ

ಸ್ತಬ್ಧವಾದಂತೆ ತೋರಿ ಆ ಸಮಯದ ಮಟ್ಟಿಗೆ ನಷ್ಟವಾದಂತೆ ಕಂಡುಬರುವುವು. ಗಾಢನಿದ್ರೆಯಲ್ಲಿ ಯಾವುದನ್ನೂ ಅರಿಯದ ಮನುಷ್ಯನನ್ನು ಆತನು ಹೋಲುವನು. ಎರಡನೆಯ ಬಗೆಯದೆಂದರೆ, ಮನುಷ್ಯನಿಗೆ ಒಂದು ಬಿಂದುವಿನ ಮೇಲೆ ಗಾಢವಾದ ಏಕಾಗ್ರತೆಯಿದ್ದರೂ ಅದರಲ್ಲಿ ಮುಳುಗಿದಂತೆ ಆತನು ಅನುಭವಿಸುವುದಿಲ್ಲ. ಮರೆವಿನಲ್ಲಿ ಅರಿವಿನ ಸ್ಥಿತಿಯೆಂದು ಇದನ್ನು ವರ್ಣಿಸಬಹುದು. ತೋರಿಕೆಗೆ ಯಾವುದರ ಅರಿವೂ ಆತನಿಗಿರದಿದ್ದರೂ ಅದು ಕೇವಲ ಛಾಯಾರೂಪದಲ್ಲಾದರೂ ಆತನಲ್ಲಿರುವುದು. ಮನುಷ್ಯನೊಬ್ಬನು ಒಂದು ಸಮಸ್ಯೆಯನ್ನು ಕುರಿತು ಆಳವಾಗಿ ಆಲೋಚಿಸುತ್ತ ರಸ್ತೆಗುಂಟ ಹೋಗುತ್ತಿರುವನೆಂದು ತಿಳಿಯಿರಿ. ಆತನು ಅದರಲ್ಲಿಎಷ್ಟರಮಟ್ಟಿಗೆ ಮಗ್ನನಾಗಿರುವನೆಂದರೆ, ದಾರಿಯಲ್ಲಿ ಬೇರೆಯದೇನೂ ಆತನಿಗೆ ಕಾಣಿಸದು; ಅಕ್ಕಪಕ್ಕದ ಯಾವ ಸಪ್ಪಳವೂ ಕೇಳಿಸದು. ಆತನು ವೈಮರೆತ ಸ್ಥಿತಿಯಲ್ಲಿ ಹೋಗುತ್ತಿರುವನು. ಆದರೂ ರಸ್ತೆಯ ಪಕ್ಕದಲ್ಲಿರುವ ಗಿಡಕ್ಕೆ ಹಾಯುವುದಿಲ್ಲ; ಆ ದಾರಿಯಲ್ಲಿ ಬರುವ ಮೋಟಾರುಕಾರಿಗೆ ಢಿಕ್ಕಿ ಹೊಡೆದು ಬೀಳುವುದಿಲ್ಲ. ಆ ಮರೆವಿನ ಸ್ಥಿತಿಯಲ್ಲಿಯೂ ಆತನು ತನಗೆ ತಿಳಿಯದಂತೆ ಈಯೆಲ್ಲ ಆವಶ್ಯಕತೆಗಳನ್ನು ಗಮನಿಸಿ ಪ್ರಸಂಗಾನುಸಾರ ವರ್ತಿಸುವನು. ಅವನಿಗೆ ಈ ಕಾರ್ಯಗಳ ಅರಿವಿರುವುದಿಲ್ಲ. ಅದು ಮರೆವಿನ ಸ್ಥಿತಿಯಲ್ಲಿ ಅರಿವಿದ್ದಂತೆ. ಮನಸ್ಸಿನ ಇಂಥ ಸ್ಥಿತಿಯಲ್ಲಿ ಉಳಿದ ವಸ್ತುಗಳ ಅರಿವು ನಿದ್ರೆಯಲ್ಲಿಯಂತೆ ತೋರಿ ಅದರ ಪರಿಣಾಮವಾಗುವುದಿಲ್ಲ. ಮೂರನೆಯದು ಸಹಜಸಮಾಧಿ. ಇದು ಏಕಾಗ್ರತೆಯ ಅತ್ಯಂತ ಸೂಕ್ಷ್ಮರೂಪವಾಗಿದೆ. ಈ ಸ್ಥಿತಿಯಲ್ಲಿ ಮನುಷ್ಯನು ಮನಸಾ ಕಾರ್ಯಮಗ್ನನಾಗಿದ್ದರೂ ಆತನು ಅಂತರ್ಯದಲ್ಲಿ ಸತ್ಯವಸ್ತುವಿನಲ್ಲಿಯೆ ನೆಲೆಸಿರುವನು. ಬಹಿರಂಗದಲ್ಲಿ ಅವನು ಹೊರಗಿನ ಕೆಲಸದಲ್ಲಿ ತೊಡಗಿದ್ದರೂ ಆತನ ಅಂತರಂಗವು ಅದೇ ಕಾಲಕ್ಕೆ ಪವಿತ್ರ ವಿಚಾರಗಳಲ್ಲಿ ತೊಡಗಿರುತ್ತದೆ. ಪ್ರಾಪಂಚಿಕ ಕಾರ್ಯಗಳಲ್ಲಿ ಅವನು ನಿರತನಾದಂತೆ ಕಂಡರೂ ಆತನು ಸದಾಕಾಲ ಸಮಾಧಿಯಲ್ಲಿಯೆ ಇರುವನು. ಇದು ಸಮಾಧಿಯ ಅತ್ಯುಚ್ಚ ಪ್ರಕಾರವಾಗಿದ್ದು ಇದರಲ್ಲಿ ಶಾಶ್ವತವಾಗಿ ನೆಲೆಸಿದ ಮೇಲೆ ಮುಂದೆ ಸಾಧಿಸುವುದೇನೂ ಉಳಿಯಲಾರದು.

ಆಧ್ಯಾತ್ಮಿಕ ಮುನ್ನಡೆಯಲ್ಲಿ ಸಂಪಾದಿಸಲಾಗುವ ಬೇರೆ ಬೇರೆ ಸ್ಥಿತಿ

ಗಳು ನಿಸರ್ಗದ ಕಾರ್ಯಕ್ಕಾಗಿ ವಿಶಿಷ್ಟ ಶಕ್ತಿಗಳಿಂದೊಡಗೂಡಿವೆ. ಅತ್ಯಂತ ಕೆಳದರ್ಜೆಯ ಪಿಂಡದೇಶವು ಎದೆಯಲ್ಲಿರುವ ಅನೇಕ ಉಪಬಿಂದುಗಳಿಂದ ಕೂಡಿದೆ. ಅದು ಪ್ರಾಚೀನ ಹಿಂದೂಸಾಹಿತ್ಯದಲ್ಲಿ ಆಗಾಗ್ಗೆ ಉಲ್ಲೇಖಿಸಲ್ಪಟ್ಟ ಪಂಚಾಗ್ನಿವಿದ್ಯೆಯ ಕೇಂದ್ರವಾಗಿದೆ. ಈ ಪ್ರದೇಶದಮೇಲೆ ಮಾನವನು ಪ್ರಭುತ್ವವನ್ನು ಗಳಿಸಿದಾಗ ಅವನಲ್ಲಿ ತಾನಾಗಿಯೆ ಭೌತವಿಜ್ಞಾನಕ್ಕೆ ಸಂಬಂಧಪಟ್ಟ ಅಪರೋಕ್ಷಜ್ಞಾನವು ಬೆಳೆಯುವುದು. ಅದನ್ನವನು ಸಾಕಷ್ಟು ಅಭ್ಯಾಸ–ಅನುಭವಗಳ ನಂತರ ತನ್ನ ಮನಸ್ಸಿಗೆ ಬಂದ ರೀತಿಯಲ್ಲಿ ಉಪಯೋಗಿಸಿಕೊಳ್ಳಬಹುದು. ಆದರೆ ಅಧ್ಯಾತ್ಮಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಅವು ಆತನ ಪ್ರಯೋಜನಕ್ಕೆ ಬರುವುದಿಲ್ಲವಾದುದರಿಂದ ಯೋಗ್ಯವಾದ ತರಬೇತಿಯ ಪದ್ಧತಿಯಲ್ಲಿ ಸಾಧಕನಿಗೆ ಈಯೆಲ್ಲ ಭೌತಿಕಶಕ್ತಿಗಳ ಅರಿವಿಲ್ಲದಂತೆ ಮಾಡಲಾಗುವುದು. ಅಲ್ಲದೆ ಕೇವಲ ಆಧ್ಯಾತ್ಮಿಕ ವಿಷಯಗಳನ್ನುಳಿದು ಬೇರೆ ಸಂಗತಿಗಳ ಕಡೆಗೆ ಆತನ ಗಮನವು ಹರಿಯಬಾರದೆಂಬ ದೃಷ್ಟಿಯಿಂದ ಗುರುವಿನ ಪ್ರತಿಫಲಿತ ಶಕ್ತಿಯ ಮೂಲಕ ಅವನ್ನು ದಾಟಿ ಹೋಗುವ ಹಾಗೆ ಸಹಾಯವನ್ನು ನೀಡಲಾಗುವುದು. ಆಗ ಅವನು ತನಗೆ ನಿರ್ವಹಿಸಲಾದ ಸಣ್ಣ ಪುಟ್ಟ ಭಗವತ್ಕಾರ್ಯಗಳನ್ನು ನೆರವೇರಿಸಲು ಯೋಗ್ಯನಾಗುವನು. ಈ ಸ್ಥಿತಿಯಲ್ಲಿ ಆತನ ಕಾರ್ಯಕ್ಷೇತ್ರವು ಒಂದು ಚಿಕ್ಕ ಪ್ರದೇಶವಾಗಿರುವುದು; ಅರ್ಥಾತ್ ಒಂದು ಪಟ್ಟಣವೋ, ಜಿಲ್ಹೆಯೋ ಅಥವಾ ಇನ್ನಾವುದಾದರೂ ದೊಡ್ಡ ವಿಭಾಗವೋ ಆಗಿರುವುದು. ನಿಸರ್ಗದ ಅಗತ್ಯಾನುಸಾರ ತನ್ನ ಕ್ಷೇತ್ರದಲ್ಲಿಯ ಪ್ರತಿಯೊಂದು ಕಾರ್ಯವನ್ನು ಕ್ರಮಗೊಳಿಸುವುದೆ ಆತನ ಕಾರ್ಯದ ಸ್ವರೂಪವಾಗಿದೆ. ತನ್ನ ಅಧಿಕಾರಕ್ಷೇತ್ರದಲ್ಲಿ ಬೇಕಾದ ಅಂಶಗಳನ್ನು ಜಾರಿಗೆ ತಂದು ಬೇಡವಾದುವುಗಳನ್ನು ತೆಗೆದು ಹಾಕುವನು. ಆತನ ಪದವಿಯು ವಸುವಿನದಾಗಿದ್ದು ಅವನು ಋಷಿಯೆಂದೆನಿಸುವನು.

ಇದಕ್ಕಿಂತಲೂ ಉನ್ನತಾಧಿಕಾರವು ಧ್ರುವನದು. ಆತನಿಗೆ ಬ್ರಹ್ಮಾಂಡ ಮಂಡಲದ ಮೇಲೆ ಪ್ರಭುತ್ವವಿದ್ದು ಅವನು ಮುನಿಗಳ ಶ್ರೇಣಿಯಲ್ಲಿ ಬರುವನು. ಅವನ ಕಾರ್ಯಕ್ಷೇತ್ರವು ವಿಶಾಲವಾಗಿದ್ದು ವಸುಗಳ ಮೇಲೆ ಅಧಿಕಾರ ನಡೆಸುವನು. ವಾಯುಮಂಡಲದಲ್ಲಿದ್ದ ಅನಾವಶ್ಯಕ ವಿಚಾರಗಳನ್ನು

ತೆಗೆದು ಹಾಕಿ ಅದನ್ನು ಶುದ್ಧಗೊಳಿಸುವುದು ಆತನ ಕರ್ತವ್ಯವಾಗಿದೆ. ತನ್ನ ನಿತ್ಯದ ಕಾರ್ಯವಲ್ಲದೆ ತಾತ್ಕಾಲಿಕವಾಗಿ ಆತನಿಗೆ ನಿರ್ವಹಿಸಲಾದ ಇತರ ಕಾರ್ಯಗಳನ್ನೂ ಆತನು ಮಾಡಬೇಕಾಗುವುದು. ಮಾನವದೇಹದಲ್ಲಿ ದಹರದೊಳಗಿನ (Hylem Shadow) ಪ್ರದೇಶವು ಪೂರ್ಣ ಪ್ರಕಾಶಿತ ವಾದಾಗಲೆ ಈ ಸ್ಥಿತಿಯು ಪ್ರಾಪ್ತವಾಗುವುದು.

ಇದಕ್ಕಿಂತ ಮೇಲೆ ಧ್ರುವಾಧಿಪನ ಸ್ಥಾನವಿದೆ. ಇವನು ಧ್ರುವರ ಕಾರ್ಯವನ್ನು ನಿರ್ದೇಶಿಸುವನು. ನಾಭಿಯ ಮೇಲ್ಗಡೆಯ ಬಿಂದುವಿನ ಮೇಲೆ ಪ್ರಭುತ್ವವುಂಟಾದಾಗ ಈ ಸ್ಥಿತಿಯು ಪ್ರಾಪ್ತವಾಗುವುದು. ಅವನ ಕಾರ್ಯಕ್ಷೇತ್ರವು ಇಡೀ ಪ್ರಪಂಚವನ್ನೇ ವ್ಯಾಪಿಸಿದರೂ ಕಾರ್ಯದ ಸ್ವರೂಪವು ಮಾತ್ರ ಧ್ರುವನಂತೆಯೆ ಆಗಿರುವುದು. ವಾಯುಮಂಡಲವನ್ನು ಶುದ್ಧ ಗೊಳಿಸುವ ದೈನಂದಿನ ಕೆಲಸವಲ್ಲದೆ ಕಾಲಕಾಲಕ್ಕೆ ಸಂಭವಿಸುವ ಆಕಸ್ಮಿಕ ಘಟನೆಗಳನ್ನು ನೋಡಿಕೊಳ್ಳಬೇಕಾಗುವುದು. ಈ ಭಗವದಧಿಕಾರಿಗಳು ಅತ್ಯುಚ್ಚ ಸಾಮರ್ಥ್ಯದ ಶ್ರೇಷ್ಠಜೀವಿಗಳಾಗಿದ್ದು ಸ್ವಾರ್ಥ ಅಥವಾ ವೈಯಕ್ತಿಕ ಭಾವನೆಗಳ ಕಡೆಗೆ ಎಳ್ಳಷ್ಟೂ ಗಮನಕೊಡದೆ ದೈವೇಚ್ಛೆಗನುಸಾರವಾಗಿ ಕೆಲಸಮಾಡುವರು. ಅವರ ಕೆಲಸವು ಸ್ವಯಂಚಲಿತವೂ ಯಾಂತ್ರಿಕವೂ ಆಗಿದ್ದು ಯಾವ ವಿಷಯದಲ್ಲಿಯೂ ಅವರಿಗೆ ವ್ಯಕ್ತಿಗತ ಸ್ವಾತಂತ್ರ್ಯವಿಲ್ಲ.

ಧ್ರುವಾಧಿಪತಿಯ ಮೇಲಿನ ಸ್ಥಾನವಾದ ಪರಿಷದವನ್ನು ಕ್ವಚಿತ್ತಾದ ಪ್ರಸಂಗಗಳಲ್ಲಿ, ನಿಸರ್ಗಕ್ಕೆ ತೀರ ಆವಶ್ಯಕವಾದಾಗಲೇ ಕೊಡಲಾಗುವುದು. ಆತನು ಮೇಲೆ ಹೇಳಲಾದ ಬೇರೆ ಬೇರೆ ಕೆಳಗಿನ ಅಧಿಕಾರಿಗಳ ಕಾರ್ಯಗಳನ್ನು ನಿರ್ದೇಶನ ಮಾಡುತ್ತ ಅವರಿಗೆ ಅನೇಕ ಕರ್ತವ್ಯಗಳನ್ನು ನಿರ್ವಹಿಸಿ ಮುಖ್ಯ- ವಾದುವನ್ನು ಮಾತ್ರ ತನಗಾಗಿ ಇಟ್ಟುಕೊಳ್ಳುವನು. ಉದಾಹರಣೆಗಾಗಿ, ಇಷ್ಟ ಪರಿಣಾಮವನ್ನುಂಟು ಮಾಡಲು ದೊಡ್ಡದೊಡ್ಡ ಯುದ್ಧೋದ್ಯಮ- ಗಳಂತಹ ಎಲ್ಲ ಮುಖ್ಯ ಸಂಗತಿಗಳಲ್ಲಿಯೂ ಆತನ ಸಂಕಲ್ಪವು ಪ್ರವರ್ತಿಸು ವುದು. ನಿಸರ್ಗದ ಎಲ್ಲ ವಿಧಾಯಕ ಹಾಗು ವಿನಾಶಕ ಯೋಜನೆಗಳನ್ನು ಆತನೇ ಕಾರ್ಯರೂಪಕ್ಕೆ ತರುವನು. ಅವನ ಕಾರ್ಯಕ್ಷೇತ್ರವು ಈ ಜಗತ್ತಿನ ಮಟ್ಟಿಗೆ ಮಾತ್ರ ಸಿಮೀತವಾಗಿದೆ. ಸಹಸ್ರದಲ ಕಮಲದ ಮಧ್ಯ-

ಬಿಂದುವಿನ ಮೇಲೆ ಪ್ರಭುತ್ವವನ್ನು ಸಂಪಾದಿಸಿದಾಗ ಮನುಷ್ಯನಿಗೆ ಈ ಸ್ಥಿತಿಯು ಪ್ರಾಪ್ತವಾಗುವುದು.

ಮಹಾಪರಿಷದನ ಸ್ಥಾನವು ಎಲ್ಲಕ್ಕಿಂತಲೂ ಉಚ್ಚವಾದುದು. ಅದು ಕೊನೆಯ ಭಗವತ್‌ಪದವಿಯಾಗಿದ್ದು ನಿಸರ್ಗದಲ್ಲಿ ಅತ್ಯುಗ್ರ ಬದಲಾವಣೆಯು ಅಗತ್ಯವಿದ್ದಾಗ ಅಥವಾ ಜಗತ್ತಿನಲ್ಲಿ ಆಮೂಲಾಗ್ರ ಪರಿವರ್ತನೆಯ ಅಗತ್ಯ-ವಿದ್ದಾಗ ಮಾತ್ರ ಇದನ್ನು ಕೊಡಲಾಗುವುದು. ಮಹಾಪರಿಷದನ ಶಕ್ತಿಯು ಅತ್ಯಂತ ಶ್ರೇಷ್ಠವಾದುದು. 'ಸಹಜಮಾರ್ಗಾನುಸಾರ ರಾಜಯೋಗದ ಪ್ರಭಾವ' (Efficacy of Rajayoga in the Light of Sahaj Marga) ವೆಂಬ ಗ್ರಂಥದ (ದ್ವಿತೀಯ ಮುದ್ರಣ) ೩೪ ನೆಯ ಪುಟದ ಮೇಲೆ ೫ನೆಯ ನಂಬರಿನ ಆಕೃತಿಯಲ್ಲಿ ಕೊಟ್ಟಂತೆ ತಲೆಯ ಹಿಂಭಾಗದ ಎಲುಬಿನ (Occipital bone) ಎಡಗಡೆಯ ಪ್ರದೇಶದಿಂದ ಈ ಶಕ್ತಿಯು ಆರಂಭ-ವಾಗುವುದು.

ಇಂತಿವೆ ರಾಜಯೋಗದ ಅದ್ಭುತ ಸಿದ್ಧಿಗಳು! ಮನುಷ್ಯನು ನಿಜವಾಗಿಯೂ ಅವುಗಳ ಬಗ್ಗೆ ಮನಃಪೂರ್ವಕ ಆಸ್ಥೆವಹಿಸಿ ಯೋಗ್ಯ ಮಾರ್ಗದರ್ಶನದಲ್ಲಿ ಸರಿಯಾದ ದಾರಿಗುಂಟ ಮುಂದುವರಿದುದಾದರೆ ಅವನ್ನು ಪಡೆಯಬಲ್ಲನು.

---

## ಅಧ್ಯಾಯ: ೧೦

# ಭವಿಷ್ಯವಾಣಿ

ಜಗತ್ತು ಇಂದು ವಿಪನ್ನಾವಸ್ಥೆಯಲ್ಲಿದೆ. ರಾಜಕೀಯ ಪರಿಸ್ಥಿತಿಯು ದಿನದಿನಕ್ಕೆ ತೊಡಕಿನದಾಗುತ್ತ ನಡೆದಿದೆ. ಆರ್ಥಿಕ ಸ್ಥಿತಿಯು ತೀರ ನಿರುತ್ಸಾಹಜನಕವಾಗಿದೆ. ನೈತಿಕ, ಧಾರ್ಮಿಕ ಹಾಗು ಸಾಮಾಜಿಕ ಪತನವು ಚರಮಸೀಮೆಯನ್ನು ಮುಟ್ಟಿದೆ. ಎಲ್ಲ ಕಡೆಗೂ ವೈರದ, ಅಶಾಂತಿಯ ಹಾಗು ಅರಕ್ಷಿತತೆಯ ವಾತಾವರಣವಾವರಿಸಿದೆ. ಪ್ರತಿಯೊಂದು ರಾಷ್ಟ್ರವು ತನ್ನ ನೆರೆಯ ರಾಷ್ಟ್ರವನ್ನು ಅಸೂಯಾದೃಷ್ಟಿಯಿಂದ ನೋಡುತ್ತ ಅದನ್ನು ಸ್ವಪ್ರಯೋಜನಕ್ಕಾಗಿ ಬಳಸಿಕೊಳ್ಳುವ ಸಾಧನಗಳನ್ನು ಹುಡುಕಲು ತನ್ನ ಎಲ್ಲ ಶಕ್ತಿಯನ್ನುಪಯೋಗಿಸುತ್ತಿದೆ. ಜಗತ್ತಿನ ರಾಜನೀತಿಜ್ಞರಿಗೆ ಈ ಸಂಗತಿಗಳು ಗೊತ್ತಿಲ್ಲದಿಲ್ಲ. ಪ್ರಪಂಚವನ್ನೆದುರಿಸುತ್ತಿರುವ ಬೇರೆ ಬೇರೆ ಸಮಸ್ಯೆಗಳಿಗೆ ತೃಪ್ತಿಕಾರಕ ಪರಿಹಾರವನ್ನು ಕಂಡುಹಿಡಿಯಲು ಅವರು ಪ್ರತಿಯೊಂದು ಸಾಧನವನ್ನೂ ಪರೀಕ್ಷಿಸುತ್ತಿದ್ದಾರೆ. ಆದರೆ ಇದಕ್ಕಾಗಿ ಸ್ಥಾಪಿತವಾದ ಎಲ್ಲ ಸಂಸ್ಥೆಗಳ ಪ್ರಯತ್ನಗಳು, ಒಟ್ಟಾರೆ, ಉತ್ಸಾಹಕರ ಪರಿಣಾಮವನ್ನುಂಟುಮಾಡುತ್ತಿರುವಂತೆ ಕಾಣುವುದಿಲ್ಲ. ಅತ್ಯಂತ ದೊಡ್ಡದೊಡ್ಡ ರಾಜಕಾರಣಿಗಳ ತಲೆಯಲ್ಲಿರುವ ಜಾಗತಿಕ ಶಾಂತಿಯ ಸಮಸ್ಯೆಯು ಮೃಗಜಲದಂತೆ ಕೇವಲ ಭ್ರಾಮಕವಾಗಿದೆ.

ಭಾರತದೊಳಗಿನ ಪರಿಸ್ಥಿತಿಯು ಉಜ್ಜ್ವಲ ಭವಿಷ್ಯವನ್ನು ಸೂಚಿಸುತ್ತಲಿಲ್ಲ. ಒಡಕುಗಳೂ ಸ್ವಪಕ್ಷದ ಭಾವನೆಗಳೂ ದೇಶದಲ್ಲೆಲ್ಲ ವ್ಯಾಪಿಸಿವೆ. ಸ್ವಾರ್ಥವು ಪ್ರಬಲವಾಗಿದೆ. ನೀತಿಯ ತತ್ತ್ವಗಳನ್ನು ಕಡೆಗಣಿಸಲಾಗುತ್ತಿದೆ. ಆಹಾರದ ಸಮಸ್ಯೆಯು ತೀಕ್ಷ್ಣವಾಗಿದೆ. ಇಷ್ಟೆಲ್ಲ ಇದ್ದರೂ ನಮ್ಮ ದೇಶವು ಪ್ರಗತಿ ಹೊಂದುತ್ತಿರುವುದೆಂದು ನಮ್ಮಲ್ಲಿ ಕೆಲವರು ಭಾವಿಸುತ್ತಿದ್ದಾರೆ. ಕೇವಲ ಭೌತಿಕತೆಯ ಮೇಲೆ ನಿಂತಿರುವ ಪಾಶ್ಚಾತ್ಯಪದ್ಧತಿಯ ನಾಗರಿಕತೆಯ ಕಡೆಗೆ ಕ್ರಮೇಣ ಸಾಗುವುದೇ ಪ್ರಗತಿಯ ಲಕ್ಷಣವೆಂದು ಅವರು ತಿಳಿದಿದ್ದಾರೆ.

ಆದರಿನ್ನು ಭೌತಿಕವಾದದ ಯುಗವು ಕೊನೆಗಾಣಲೇ ಬೇಕು. ಹಳೆಯ ಪರಿಸ್ಥಿತಿಯು ಬದಲಾಯಿಸಿ ಹೊಸ ಪರಿಸ್ಥಿತಿಯು ನಿರ್ಮಾಣವಾಗಲೇಬೇಕು. ವಿದ್ಯುತ್ತು ಹಾಗು ಅಣುಶಕ್ತಿಯ ಆಧಾರದ ಮೇಲೆ ನಿಂತಿರುವ ಇಂದಿನ ಜಾಗತಿಕ ನಾಗರಿಕತೆಯ ಸೌಧವು ಬಹುಕಾಲ ಬಾಳಲಾರದು. ಇಂದಿಲ್ಲ ನಾಳೆ ಅದು ಕುಸಿದು ಬೀಳಲೇ ಬೇಕು. ಕೇವಲ ಭೌತಿಕವಾದ ವಿಷಮಯ ಪರಿಣಾಮವು ವಾಯುಮಂಡಲದಲ್ಲಿ ಎಷ್ಟರಮಟ್ಟಿಗೆ ವ್ಯಾಪಿಸಿರುವುದೆಂದರೆ ಅದನ್ನು ಶುದ್ಧಗೊಳಿಸುವುದು ಮಾನವನ ಅಂಕಿತವನ್ನು ಮೀರಿದೆ. ಸಮೀಪ-ದಲ್ಲಿಯೆ ಇರುವ ಅನಿವಾರ್ಯವಾದ ಪರಿವರ್ತನೆಗೆ ಕಾಲವು ಪಕ್ವವಾಗಿದ್ದು, ನಾನು 'ರಾಜಯೋಗದ ಪ್ರಭಾವ' (Efficacy of Rajayoga in the Light of Sahaj Marga) ವೆಂಬ ನನ್ನ ಪುಸ್ತಕದಲ್ಲಿ ಸೂಚಿಸಿ ದಂತೆ ದೈವೀಶಕ್ತಿಯು ಮಾನವ ರೂಪದಲ್ಲಿ ಅದಕ್ಕಾಗಿ ಕಾರ್ಯ ಪ್ರವೃತ್ತ ವಾಗಿದೆ. ಕೆಲವರಿಗೆ ಇದರಲ್ಲಿ ಸದ್ಯಕ್ಕೆ ನಂಬುಗೆಯಾಗದಿದ್ದರೂ ಈ ಸಂಗತಿ-ಯು ನಿಸ್ಸಂದೇಹವಾದುದು. ಘಟನೆಗಳು ಸಾಕಷ್ಟು ಬೆಳಕಿಗೆ ಬಂದಾಗ ಜಗತ್ತಿಗೆ ಆತನ ಬಗ್ಗೆ ಹಾಗು ಆತನ ಕಾರ್ಯಗಳ ಬಗ್ಗೆ ಗೊತ್ತಾಗುವುದು. ಭಗವತ್ಕಾರ್ಯವು ಯಾವಾಗಲೂ ಶ್ರೇಷ್ಠಶಕ್ತಿಯ ಮನುಷ್ಯನ ಮೂಲಕ ವಾಗಿಯೆ ಸಾಧಿಸಲ್ಪಡುವುದಲ್ಲದೆ ನೇರವಾಗಿ ಅಲ್ಲ. ಆದಕ್ಕೆ ಕಾರಣವೆಂದರೆ ದೇವರಿಗೆ, ವಸ್ತುಗಳನ್ನು ಕಾರ್ಯಗತಗೊಳಿಸಲು ಏಕಮೇವ ಸಾಧನವಾದ ಮನಸ್ಸೆಂಬುದಿಲ್ಲ. ಮನುಷ್ಯನಿಗಾದರೋ ಮನಸ್ಸಿದೆ. ಆದರೆ ಆತನು ಸಂಪೂರ್ಣವಾಗಿ ತನ್ನ ವ್ಯಕ್ತಿತ್ವದ ಭಾವನೆಯನ್ನು ಮರೆತಾಗ ಮಾತ್ರ ಅದನ್ನು ಇಂಥ ಕಾರ್ಯಗಳಿಗಾಗಿ ಉಪಯೋಗಿಸಬಹುದು. ಅವನು ಪೂರ್ಣ ಆತ್ಮನಿರಾಸವನ್ನು ಹೊಂದಿದ ಮೇಲೆ ಅವನಲ್ಲುಳಿಯುವುದು ಮಾನವೀಯ ಮನಸ್ಸಲ್ಲ, ಶುದ್ಧ ಮತ್ತು ಪರಾಸ್ಥಿತಿಯ ದೈವೀ ಮನಸ್ಸು. ಮಾನವ-ದೇಹದಲ್ಲಿದ್ದಂತೆ ತೋರಿದರೂ ಇಂಥ ದೈವೀಮನಸ್ಸಿನ ಮೂಲಕವಾಗಿಯೆ ಪ್ರಕೃತಿಯು ಕೆಲಸ ಮಾಡುವುದು.

ಈಗ ನಾನು ನನ್ನ ಅಂತರ್ದೃಷ್ಟಿಯಲ್ಲಿ ಕಂಡಂತೆ ಮುಂಬರುವ ಜಗ-ತ್ತಿನ ಒಂದು ಸುಳುಹನ್ನು ಓದುಗರ ಮುಂದಿಡುವೆನು. ನೀವು ನಂಬಿರಿ ಅಥವಾ ಬಿಡಿರಿ, ನಾನು ಅತೀಂದ್ರಿಯ ದೃಷ್ಟಿಯಿಂದ ಪ್ರಕೃತಿಯಲ್ಲಿ ಕಂಡದ್ದು

ಹಾಗೆ. ಜಗತ್ತಿನಲ್ಲಿರುವ ಅನಿಷ್ಟಾಂಶಗಳ ನಾಶವು ಪ್ರಾರಂಭವಾಗಿರುವ ಚಿಹ್ನೆಗಳು ಸ್ಪಷ್ಟವಾಗಿ ಕಾಣುತ್ತಿವೆ. ಇಂಥ ಉದಾಹರಣೆಗಳು ಹಿಂದೆ ಈ ಜಗತ್ತು ಅಸ್ತಿತ್ವದಲ್ಲಿದ್ದಾಗ ಎಷ್ಟೋ ಸಲ ಸಂಭವಿಸಿವೆ. ರಾವಣನೊಂದಿಗೆ ರಾಮನ ಯುದ್ಧವೂ ನೋವಾನ ಜಲಪ್ರಳಯವೂ ಮಹಾಭಾರತ ಯುದ್ಧವೂ ಇಂಥ ಅನೇಕ ಉದಾಹರಣೆಗಳಲ್ಲಿ ಹಲವಾಗಿವೆ. ಇಂಥ ವಿನಾಶವು ನಾನಾ ರೀತಿಗಳಿಂದ ಸಂಭವಿಸುವುದು. ಯುದ್ಧವಾಗಲಿ, ಅಂತಃಕಲಹವಾಗಲಿ, ಜ್ವಾಲಾಮುಖಿಯಂತಹ ದೈವೀ ವಿಪತ್ತಾಗಲಿ, ಇನ್ನಿತರ ಕಾರಣಗಳಾಗಲಿ ಇರಬಹುದು. ಆ ಕೊನೆಯ ಹಂತವನ್ನು ಮುಟ್ಟಲು ಕಾಲವು ಪಕ್ವವಾಗಿದ್ದು ಜಗತ್ತು ಆ ಕಡೆಗೆ ವೇಗವಾಗಿ ಸಾಗುತ್ತಿದೆ. ಈ ಶತಮಾನಾಂತ್ಯದಲ್ಲಿ ಈ ಕಾರ್ಯವು ಒಂದು ಭರಕ್ಕೆ ಬರುವು-ದಾದರೂ ಮುಂದೆ ವಿವರಿಸಲಾಗುವ ಕೆಲವು ಘಟನೆಗಳು ಸಂಭವಿಸಲು ದೀರ್ಘಕಾಲ ಹಿಡಿಯಬಹುದು.

ಕೆಲಕಾಲದಿಂದ ಸೂರ್ಯನ ಉಷ್ಣತೆಯು ಸಾವಕಾಶವಾಗಿ ಕಡಿಮೆ-ಯಾಗುತ್ತ ನಡೆದಿದ್ದು ಮುಂದೆ ಕೆಲಕಾಲಾನಂತರ ಈ ಭೂಮಂಡಲದ ಮೇಲೆ ಸೂರ್ಯನ ಉಷ್ಣತೆಯು ಸಾಕಷ್ಟು ಲಭಿಸದೆ ಜೀವನವು ಅಸಾಧ್ಯ ವಾಗಬಹುದಾದುದರಿಂದ ಇದು ವಿಜ್ಞಾನಿಗಳಿಗೆ ಗಾಬರಿಗೊಳಿಸುವ ಸಮಸ್ಯೆ ಯಾಗಿದೆ. ಬೇಕಾದಷ್ಟು ಭೌತಿಕಸಾಧನಗಳು ಅವರ ಅಂಕಿತದಲ್ಲಿದ್ದರೂ ಅವರಿಗೆ ಈ ಸಮಸ್ಯೆಯ ಪರಿಹಾರವು ಹೊಳೆಯುತ್ತಲಿಲ್ಲ. ಆದರೆ ಸದ್ಯ ಅದು ಅಷ್ಟುಮಟ್ಟಿಗೆ ಕಡಿಮೆಯಾಗದೆಂದು ನಾನು ಅವರಿಗೆ ಆಶ್ವಾಸನಕೊಡ ಬಲ್ಲೆ. ನಿಸರ್ಗದ ಪರಿವರ್ತನಕಾರ್ಯವನ್ನು ತ್ವರೆಗೊಳಿಸಲು ಅದು ಕಡಿಮೆ ಯಾಗುತ್ತಿದ್ದು ಅದಕ್ಕಾಗಿ ನಿಯೋಜಿತನಾದ ವಿಭೂತಿಯು ಆ ಕಾರ್ಯ-ಕ್ಕಾಗಿ ಅದನ್ನುಪಯೋಗಿಸುತ್ತಿರುವನು. ಇಡೀ ಜಗತ್ತಿನಲ್ಲೆಲ್ಲ ಮುಂಬರುವ ಪರಿವರ್ತನೆಗೆ ಅದು ಅಮೋಘವಾದ ಚಿಹ್ನೆಯಾಗಿದೆ. ಅನಂತರ ಸೂರ್ಯನು ಮೊದಲಿನಂತೆ ಪೂರ್ಣ ತೇಜವನ್ನು ಪಡೆಯುವನು. ಮತ್ತೆ ಮಹಾಪ್ರಳ-ಯದ ಕಾಲದಲ್ಲಿ ಇದೇ ಲಕ್ಷಣವು ಕಾಣಬರುವುದು. ಆದರೆ ಅದು ಬಹು ದೂರದ ಮಾತಾದುದುರಿಂದ ಆ ಬಗ್ಗೆ ನಾನಿಲ್ಲಿ ಚರ್ಚಿಸಬಯಸುವುದಿಲ್ಲ. ಈ ಸಂದರ್ಭದಲ್ಲಿ ಓದುಗರ ಆಸಕ್ತಿಯನ್ನು ಕೆರಳಿಸಲು ಒಂದು ವಿಷಯವನ್ನು ಹೇಳಬಹುದು. ಮಹಾಪ್ರಳಯದ ಕಾಲಕ್ಕೆ ಧ್ರುವನಕ್ಷತ್ರವು ತನ್ನ ಸ್ಥಾನ

ದಿಂದ ಕೆಲವು ಅಂಶ ಸರಿದು ಹೆಚ್ಚು ಉಷ್ಣತೆಯನ್ನು ಪಡೆಯುವುದು. ಒಂದು ಪ್ರಬಲ ಶಕ್ತಿಯು ಅದರೊಳಗಿಂದ ಅನಿಲರೂಪದಲ್ಲಿ ಹೊರಬಿದ್ದು, ಕಟ್ಟಕಡೆಗೆ ಜಗತ್ತನ್ನೂ, ಅಸ್ತಿತ್ವದಲ್ಲಿರುವ ಪ್ರತಿಯೊಂದು ವಸ್ತುವನ್ನೂ ನಾಶಗೊಳಿಸು-ವುದು. ಉತ್ತರ ಧ್ರುವದಿಂದಲೇ ಪ್ರಳಯದ ಆರಂಭವಾಗುವುದು.

ಸದ್ಯದ ಕ್ರಾಂತಿಯ ಪರಿಣಾಮವಾಗಿ ಉಗ್ರ ಬದಲಾವಣೆಗಳು ಘಟಿಸಿ ಜಗತ್ತಿನ ಹೊಸರಚನೆಯು ಇಂದು ನಾವು ಕಾಣುವುದಕ್ಕಿಂತ ತೀರ ಭಿನ್ನ ವಾಗಿರುವುದು. ಗ್ರೇಟ್‌ಬ್ರಿಟನ್ನಿನ ಸ್ಥಿತಿಯು ಶೋಚನೀಯವಾಗುವುದು. ಅದರ ದಕ್ಷಿಣ ಭಾಗವು ಸಮುದ್ರದಲ್ಲಿ ಮುಳುಗುವುದು. ಲಂಡನ್ನಿನ ಮಧ್ಯ ದಲ್ಲಿ ಜ್ವಾಲಾಮುಖೀ ಶಕ್ತಿಯೊಂದು ಗುಪ್ತರೂಪದಲ್ಲಿ ಕೆಲಸಮಾಡುತ್ತಿದ್ದು ಕಾಲಕ್ರಮದಲ್ಲಿ ಅದು ಸ್ಫೋಟವಾಗುವುದು. 'ಗಲ್ಫ್‌ಸ್ಟ್ರೀಮ್' ತನ್ನ ಪ್ರವಾಹದಿಶೆಯನ್ನು ಬದಲಾಯಿಸುವುದರಿಂದ ಆ ದೇಶವು ಅತ್ಯಂತ ಶೀತ-ವಾಗುವುದು. ಚಿಕ್ಕ ಚಿಕ್ಕ ದೇಶಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳು-ವುವು. ರಷ್ಯದ ಭವಿಷ್ಯವು ಅಂಧಕಾರಮಯವಾಗಿದ್ದು ಅದು ಉಳಿಯು-ವುದು ಸಾಧ್ಯವಿಲ್ಲ. ಅದರ ಆಯುಧವೇ ಅದಕ್ಕೆ ಮಾರಕವಾಗುವುದು. ಸಾಮ್ಯವಾದವು ತಾನು ಹುಟ್ಟಿದ ದೇಶದಲ್ಲಿಯೆ ಸತ್ತುಹೋಗುವುದು. ಅಮೇರಿ ಕಾದ ಬಗ್ಗೆ ಹೇಳಬೇಕಾದರೆ, ಅದು ತನ್ನ ಸಂಪತ್ತನ್ನೆಲ್ಲ ಸಮೀಪದಲ್ಲಿಯೆ ಕಳೆದುಕೊಳ್ಳುವ ಭಯವಿದ್ದು ಕಾಲಕ್ರಮದಲ್ಲಿ ಕಂಗಾಲಸ್ಥಿತಿಗಿಳಿಯಬಹುದು. ಅದರ ಸಾಮರ್ಥ್ಯ—ಘನತೆಗಳೂ ಸಂಪತ್ತಿನೊಂದಿಗೆ ಮುಳುಗಿ ಹೋಗುವುವು. ಭಾರತವು ತನ್ನ ಪ್ರಾಚೀನ ಕೀರ್ತಿಯನ್ನು ಮತ್ತೆ ಪಡೆದು ತನ್ನ ಪ್ರಭುತ್ವದಡಿ-ಯಲ್ಲಿಯೆ ಘನತೆಗೇರುವುದು. ಅದರ ಆಧಿಪತ್ಯವು ದೂರದೂರದ ವರೆಗೂ ಹರಡಿ ಜಗತ್ತು ಬೆಳಕಿಗಾಗಿ ಅದರ ಕಡೆಗೆ ನೋಡುವುದು. ಆದರೆ ಜಗ-ತ್ಕ್ರಾಂತಿಯಲ್ಲಿ ಅದೂ ಪಾಲುಗೊಳ್ಳುವುದು. ದೇಶದಲ್ಲಿ ವಿದ್ರೋಹದ ಅಂಕುರವು ಬೆಳೆಯುತ್ತಲಿದೆ. ದೇಶದ ಒಂದು ಭಾಗವು, ಅರ್ಥಾತ್ ಬಂಗಾಲದ ಪೂರ್ವಭಾಗವು, ಸಮುದ್ರದಲ್ಲಿ ಮುಳುಗುವುದು. ಜ್ವಾಲಾಮುಖಿ ಶಕ್ತಿಯೂ ಕಾರ್ಯಪ್ರವೃತ್ತವಾಗಿದ್ದು ಅದರಿಂದ ವಿಶೇಷತಃ ಬಿಹಾರದ ರಾಜ್ಯಕ್ಕೆ ಅಪಾಯವುಂಟಾಗುವುದು. ದೂರದ ಭವಿಷ್ಯತ್ತಿನಲ್ಲಿ ದಕ್ಷಿಣ ಪ್ರಸ್ಥ-ಭೂಮಿಯು ಒಂದು ದ್ವೀಪವಾಗಿ ಪರಿಣಮಿಸಬಹುದು. ಜಗತ್ತಿನಲ್ಲೆಲ್ಲ

ಭೀಷಣ ರಕ್ತಪಾತವಾಗುವುದು. ನಾನಾವಿಧದಿಂದ ಜೀವನಾಶವಾಗಿ ಜಗತ್ತಿನ ಜನಸಂಖ್ಯೆಯು ಸಾಕಷ್ಟು ಕಡಮೆಯಾಗುವುದು. ಅಸ್ಥಿ–ಭಸ್ಮಗಳ ಮೇಲೆ ಮುಂಬರುವ ಜಗತ್ತಿನ ರಚನೆಯಾಗುವುದು. ಭಾರತದಲ್ಲಿ ಅಧ್ಯಾತ್ಮದ ತಳಹದಿಯ ಮೇಲೆ ಒಂದು ವಿಧದ ನಾಗರಿಕತೆಯು ಬೆಳೆದು ಕ್ರಮೇಣ ಅದು ಪ್ರಪಂಚದ ನಾಗರಿಕತೆಯಾಗುವುದು. ಅಧ್ಯಾತ್ಮದ ತಳಹದಿಯಿಲ್ಲದೆ ಯಾವುದೇ ದೇಶವಾಗಲಿ ರಾಷ್ಟ್ರವಾಗಲಿ ಬದುಕಲಾರದು. ತನ್ನ ಅಸ್ತಿತ್ವವನ್ನುಳಿಸಿಕೊಳ್ಳಬೇಕಾದರೆ ಪ್ರತಿಯೊಂದು ರಾಷ್ಟ್ರವೂ ಇಂದಿಲ್ಲ ನಾಳೆ ಆ ದಾರಿಗೆ ಬರಲೇಬೇಕಾಗುವುದು.

---